ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಮಿರ್ಜಾ ಗಾಲಿಬ್

ಲೇಖಕ

ಮಾಲಿಕ್ ರಾಮ್

ಅನುವಾದ

ಬಿ. ಎ. ಸನದಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಅನುಕ್ರಮಣಿಕೆ

# ಪ್ರಸ್ತಾವನೆ

ಉತ್ತರ ಭಾರತದ ಬಹುಭಾಗದ ಮೇಲೆ ಇಬ್ರಾಹಿಮ್ ಲೋದಿಯ ಆಳಿಕೆಯಿದ್ದಾಗ ಕಾಬುಲದ ದೊರೆ ಬಾಬರ್ ಭಾರತದ ಮೇಲೆ ಆಕ್ರಮಣ ನಡೆಸಿದ. ಇಬ್ರಾಹಿಮನ ಕೆಲವು ಅಸಂತುಷ್ಟ ಸರದಾರರೇ ಲೋದಿ ಮನೆತನದ ಈ ಕೊನೆಯ ಅರಸನನ್ನು ಗದ್ದುಗೆಯಿಂದಿಳಿಸಲು ತಮಗೆ ನೆರವಾಗಬೇಕೆಂದು ಬಾಬರನಿಗೆ ವಿನಂತಿಸಿಕೊಂಡಿದ್ದರು. ಭಾರತದ ಫಲವತ್ತಾದ ಬಯಲು ಸೀಮೆಯ ಮೇಲೆ ಮೊದಲಿನಿಂದಲೂ ಕಣ್ಣಿಟ್ಟುಕೊಂಡೇ ಇದ್ದ ಬಾಬರ್ ತನ್ನ ಗುಡ್ಡಗಾಡು ಹಾಗು ಕಷ್ಟಕರ ಪ್ರದೇಶದಿಂದೀಚೆಗೆ ಪದಾರ್ಪಣ ಮಾಡಲು ತಕ್ಕ ಕ್ಷಣಕ್ಕಾಗಿ ಕಾಯುತ್ತಲೇ ಇದ್ದ. ಸರಿ, ಈಗವನಿಗೆ ತುಂಬಾ ಅನುಕೂಲ ಆಮಂತ್ರಣ ದೊರೆಯಿತು; ತಕ್ಷಣ ಸ್ವೀಕರಿಸಿ ಬಿಟ್ಟ. ತನ್ನಲ್ಲಿದ್ದ ಸಣ್ಣ ಪ್ರಮಾಣದ ಸೈನ್ಯದೊಡನೆ ಭಾರತದ ಸೀಮೆಯ ಮೇಲೆ ಕಾಲಿರಿಸಿದ. 1526ರ ಮಾರ್ಚ್ 21 ರಂದು ಪಾನಿಪತ್‌ನಲ್ಲಿ ಇಬ್ರಾಹಿಮ್ ಲೋದಿಯ ಸೈನ್ಯದೊಡನೆ ಅವನ ನಿರ್ಣಾಯಕ ಯುದ್ಧ ನಡೆಯಿತು. ಇಬ್ರಾಹಿಮನ ಸೈನ್ಯದ ಪರಾಭವವಾದುದಲ್ಲದೆ ಅವನೂ ಯುದ್ಧದಲ್ಲಿ ಅಸು ನೀಗಿದ. ಹೀಗೆ ಪಾನಿಪತ್ ವಿಜಯದ ಆ ದಿನದಿಂದ ಭಾರತದಲ್ಲಿ ಮೊಗಲ ಸಾಮ್ರಾಜ್ಯದ ಅಡಿಪಾಯ ಹಾಕಿದಂತಾಯಿತು.

ಪಾನಿಪತ್‌ನಲ್ಲಿ ನಿರ್ಣಾಯಕ ವಿಜಯವೇನೋ ದೊರೆಯಿತು. ಆದರೆ ಅದು ಇಡಿಯ ಭಾರತವನ್ನೇ ಗೆದ್ದುಕೊಂಡ ವಿಜಯವೇನೂ ಅಲ್ಲ. ಅದಾದ ಬಳಿಕ ನಾಲ್ಕು ವರ್ಷ ಬಾಬರ್ ಜೀವಿಸಿದ್ದ. ಅವನ ಅಧಿಕಾಂಶ ಸಮಯವೆಲ್ಲ ಸಣ್ಣ-ಪುಟ್ಟ ರಾಜರು ಹಾಗು ಮಾಂಡಲಿಕರೊಡನೆ ಕಾದಾಡುವುದರಲ್ಲೇ. ಕಳೆಯಿತು. 1530ರಲ್ಲಿ ಆತ ತೀರಿಕೊಂಡ. ಬಳಿಕ ಆತನ ಹಿರಿಯ ಮಗ ಹುಮಾಯೂನ್ ಪಟ್ಟವೇರಿದ. ಆಗಲೂ ಅವರ ಹೊಸ ಸಾಮ್ರಾಜ್ಯದ ನೆಲಗಟ್ಟು ಸುಭದ್ರವೆಂದು ಹೇಳಿಕೊಳ್ಳುವಂತಿರಲಿಲ್ಲ. ಹುಮಾಯೂನನ ಕಾಲಕ್ಕೆ ಪರಿಸ್ಥಿತಿ ಇನ್ನೂ ಹದಗೆಟ್ಟಂತಾಗಿ, ಅವನು ಭಾರತದಿಂದ ತೊಲಗಿ ಇರಾನ್‌ನಲ್ಲಿ ಹೋಗಿರಬೇಕಾಯಿತು. ಅವನ ಅನುಪಸ್ಥಿತಿಯಲ್ಲಿ ಶೇರಶಹಾ ಸೂರಿ ಹೊಸ ರಾಜವಂಶವೊಂದನ್ನು ಸ್ಥಾಪಿಸಿದ. ಆದರೆ ಅವನ ಉತ್ತರಾಧಿಕಾರಿಗಳ ಅದಕ್ಷತೆಯಿಂದಾಗಿ ಆ ವಂಶ ಅನತಿ ಕಾಲದಲ್ಲೆ ನಿರ್ನಾಮವಾಯಿತು. ಈ ಮಧ್ಯದಲ್ಲಿ, ಕೈಬಿಟ್ಟು ಹೋದ ತನ್ನ ಸಾಮ್ರಾಜ್ಯವನ್ನು ಮರಳಿ ಪಡೆಯಲು ಸೇನೆಯ ಸಹಾಯ ನೀಡುವಂತೆ ಇರಾನಿನ ದೊರೆಯ ಮನವೊಲಿಸಿ ಹುಮಾಯೂನ್ ಸಜ್ಜುಗೊಂಡಿದ್ದ. ಹುಮಾಯೂನ್ 1555 ರಲ್ಲಿ ಇರಾನ್ ಸೈನ್ಯದೊಂದಿಗೆ ಭಾರತದ ಮೇಲೆ ಮತ್ತೆ ದಂಡೆತ್ತಿ ಬಂದ. ಶೇರಶಹಾ ಸೂರಿಯ ನಂತರ, 1545ರಲ್ಲಿ, ಅಧಿಕಾರಕ್ಕೆ ಬಂದಿದ್ದ

ಅವನ ಮಗ ಸಲೀಮ್‌ಶಹನನ್ನು ಸದೆ ಬಡಿದು ಭಾರತದ ಸಿಂಹಾಸನವನ್ನು ಮರಳಿ ಪಡೆದ. ಈ ಬಾರಿ ಹಿಂತಿರುಗಿ ಹೋಗುವ ಪ್ರಶ್ನೆಯಿರಲಿಲ್ಲ. ಭಾರತದಲ್ಲಿ ಅಂದಿನಿಂದ 300 ವರ್ಷಗಳವರೆಗೆ ಮೊಗಲ ಸಾಮ್ರಾಜ್ಯ ನಿರಾತಂಕವಾಗಿ ಮೆರೆಯಿತು.

ಹುಮಾಯೂನನ ನಂತರ ಅವನ ಮಗ ಅಕಬರ ಬಾದಶಹ 1556ರಲ್ಲಿ ಪಟ್ಟವೇರಿದ. ಆತ ಇಂಗ್ಲೆಂಡಿನ ಮಹಾರಾಣಿ ಮೊದಲನೇ ಎಲಿಜಬೆಥ್‌ಳ ಸಮಕಾಲೀನ. ಅವರಿಬ್ಬರೂ ಸಫಲ ಶಾಸಕರೆನಿಸಿದರು. ಅವರಿಬ್ಬರ ಸಾಧನೆ-ಸಿದ್ಧಿಗಳೂ ಗಣನೀಯವೆನಿಸಿದವು. ಅಕಬರನ ಅರ್ಧ ಶತಕದ ಆಡಳಿತಕಾಲ ಭಾರತದ ಇತಿಹಾಸದಲ್ಲೇ ಅತ್ಯಂತ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿತು. ಆಗ ಭಾರತದಲ್ಲಿ ಪ್ರತಿಯೊಂದು ರಂಗದಲ್ಲಿಯೂ ಪ್ರಗತಿಯಾಯಿತು. ದೇಶದೊಳಗೆ ಶಾಂತಿ-ಸಮೃದ್ಧಿಗಳ ವಾತಾವರಣ ಹರಡಿದರೆ, ಪರದೇಶಗಳಲ್ಲಿ ಭಾರತದ ಕೀರ್ತಿ-ಗೌರವಗಳ ವೃದ್ಧಿಯಾಯಿತು. ಆಗ್ರಾದಲ್ಲಿದ್ದ ಶಾಹೀ ದರಬಾರ್ ಇರಾನ್ ಮತ್ತು ಪಶ್ಚಿಮ ಏಶಿಯಾದ ಇತರ ದೇಶಗಳ ಸರ್ವ ವಿಧದ ಸಫಲತಾಕಾಂಕ್ಷಿಗಳ, ವಿದ್ವಾಂಸ-ಲೇಖಕರ, ಸೇನಾನಿ-ರಾಜನೀತಿಜ್ಞರ ಪವಿತ್ರ ಯಾತ್ರಾ ಸ್ಥಳ (ಮೆಕ್ಕಾ) ಅನಿಸಿಕೊಂಡಿತು. ಹೀಗಾಗಿ, ಅನತಿಕಾಲದಲ್ಲೇ ಅಕಬರನ ಖ್ಯಾತಿ ಯುರೋಪಿನವರೆಗೂ ವ್ಯಾಪಿಸಿತು. ತತ್ಪರಿಣಾಮವಾಗಿ ಭಾರತದತ್ತ ಹೊಸ ವಿಚಾರಧಾರೆಗಳ ನಿರಂತರ ಪ್ರವಾಹವೇ ಪ್ರಾರಂಭವಾಗಿ, ಭಾರತದ ರಾಜಕೀಯ ಹಾಗೂ ಸಾಂಸ್ಕೃತಿಕ ಜೀವನದಲ್ಲಿ ಹೊಸ ರಕ್ತದ ಸಂಚಾರವಾಯಿತು. ವಿಕಾಸದ ಗತಿ ತೀವ್ರಗೊಂಡಿತು.

ಅಕಬರನ ತರುವಾಯ ಮೊಗಲ ಸಾಮ್ರಾಜ್ಯದ ಭೌತಿಕ ಪ್ರಗತಿ ಮುಂದಿನ ಮೂರು ಪೀಳಿಗೆಗಳವರೆಗೂ ನಿರಾತಂಕವಾಗಿ ನಡೆಯಿತು. ಜಹಾಂಗೀರ್ ಮತ್ತು ಶಹಜ ಹಾನ್ ದೊರೆಯ ಕಾಲದಲ್ಲೇ ಮೊಗಲ ರಾಜ್ಯಪದ್ಧತಿಯ ಕಸುವು ಕಡಿಮೆಯಾದಂತೆ ಕಂಡರೂ ಮುಂದೆ ಔರಂಗಜೇಬನ ಕಾಲಾವಧಿಯಲ್ಲಿ ಅದರ ದೌರ್ಬಲ್ಯ ನಿಚ್ಚಳವಾಗಿ ಗೋಚರಿಸಿತು. ಜಹಾಂಗೀರ್, ಶಹಜಹಾನ್ ಅಥವಾ ಔರಂಗಜೇಬರ ಕಾಲದಲ್ಲಿ ಸೈನಿಕ ಸಾಧನೆಯಲ್ಲಿ ವಿಶೇಷವೆನಿಸುವ ಸಾಫಲ್ಯವೇನೂ ಒದಗಿ ಬಂದುದಿಲ್ಲ. ನಿಜವಾಗಿ ಔರಂಗಜೇಬನ ಕಾಲಾವಧಿಯಲ್ಲಿ ಈ ಸಾಮ್ರಾಜ್ಯ ಅದೆಷ್ಟು ಶಕ್ತಿಹೀನ ಸ್ಥಿತಿಗಿಳಿಯಿತೆಂದರೆ ಅವನು ತನ್ನ ಜೀವನದ ಕೊನೆಯ ಇಪ್ಪತ್ತು ವರ್ಷಗಳನ್ನು ದಕ್ಷಿಣದ ಸಮರಾಂಗಣದಲ್ಲೇ ಕಳೆದು ಮರಳಿ ಬಾರದೆ ಕೊನೆಗೆ 1707ರ ಫೆಬ್ರವರಿಯಲ್ಲಿ ಅಹಮ್ಮದನಗರದಲ್ಲಿ ಅಸುನೀಗಬೇಕಾಯಿತು. ಮುಂದಿನ 150 ವರ್ಷಗಳಲ್ಲಿ - ಅಂದರೆ 1857ರವರೆಗೆ ಮೊಗಲ ಸಾಮ್ರಾಜ್ಯ ಇಳಿಜಾರಿನ ದಾರಿಯನ್ನೇ ಹಿಡಿಯಿತು. ಮೊಗಲ ಮನೆತನದ ಕೊನೆಯರಸ ಎರಡನೇ ಬಹಾದ್ದುರ ಶಹಾನನ್ನು ಬ್ರಿಟಿಷರು ಪದಚ್ಯುತಗೊಳಿಸಿ, ಕೈದು ಮಾಡಿ ರಂಗೂನಿಗೆ ಸಾಗಿಸಿದರು. 1739ರಲ್ಲಿ ಭಾರತದ ಮೇಲೆ ದಂಡೆತ್ತಿ ಬಂದು, ವೈರಿಸೇನೆಯನ್ನು ಸದೆಬಡಿದು, ಸಾಮ್ರಾಜ್ಯದ ರಾಜಧಾನಿಯನ್ನು ಕೊಳ್ಳೆಹೊಡೆದ ಇರಾನಿನ ದೊರೆ ನಾದಿರ ಶಹಾನಿಂದ ಮೊಗಲ ರಾಜ್ಯಾಡಳಿತಕ್ಕೆ ಉಗ್ರರೂಪದ ಮೊದಲೇಟು ಬಿದ್ದಂತಾಯಿತು. ಈ ಹೊಡೆತದಿಂದ ದೇಶ ಚೇತರಿಸಿಕೊಳ್ಳುವ ಮೊದಲೇ, 1761ರಲ್ಲಿ ಅಹಮ್ಮದಶಹಾ ಅಬ್ದಾಲಿ ಸೈನಿಕ ಧಾಳಿಗೈದು ನಾದಿರಶಹಾನಂತೆಯೇ ಮತ್ತೊಮ್ಮೆ

ಕೋಲಾಹಲಗೈದ. ಇದಾದನಂತರವೂ ಸುಮಾರು ಒಂದು ಶತಮಾನದಷ್ಟು ಕಾಲ ಮೊಗಲ ಮನೆತನದ ಆಳಿಕೆ ಮುಂದುವರಿದಿತ್ತಾದರೂ, ಕ್ರಮೇಣ ಅದರ ರಾಜವೈಭವವೆಲ್ಲ ಕರಗುತ್ತ ಬಂದು, ಕೊನೆಕೊನೆಗೆ ದೆಹಲಿಗೆ ಮಾತ್ರವೇ ಸೀಮಿತಗೊಂಡಿತು. ಮೊದಲು ಮೊಗಲರಸರು ತಮ್ಮ ಸಾಮ್ರಾಜ್ಯದ ಬೇರೆ ಬೇರೆ ಪ್ರಾಂತಗಳ ಆಡಳಿತಕ್ಕೆಂದು ನಿಯಮಿಸಿದ ಸುಬೇದಾರರೂ ಸೇನಾಪ್ರಮುಖರೂ ಕ್ರಮೇಣ ತಾವು ಸ್ವತಂತ್ರರೆಂದು ಘೋಷಿಸಿದರು.

## ಪರಿವಾರ

ದೆಹಲಿಯಲ್ಲಿದ್ದ ಮೊಗಲ್ ದರಬಾರ್ ತನ್ನ ಅಂತಿಮ ಹಂತದಲ್ಲಿ ಯಾವ ವಿದೇಶೀಯನಿಗೂ ಯಾವೊಂದು ಗೌರವದ ಕೆಲಸವನ್ನಾಗಲೀ, ಸ್ಥಾನ-ಮಾನಗಳನ್ನಾಗಲೀ, ಸಂರಕ್ಷಣೆಯನ್ನಾಗಲೀ ನೀಡುವಂತಹ ಸ್ಥಿತಿಯಲ್ಲಿ ಉಳಿದಿರಲಿಲ್ಲ. ತತ್ಪರಿಣಾಮವಾಗಿ, ಹೊರಗಿನಿಂದ ಬರುವ ಸಫಲತಾಕಾಂಕ್ಷಿಗಳ ಸಂಖ್ಯೆ ಬರುಬರುತ್ತ ಕರಗುತ್ತ ಹೋಗಿ, ಕೊನೆಕೊನೆಗೆ ನಾಮಮಾತ್ರಕ್ಕೆ ಉಳಿದಂತಾಯಿತು. ಇಂಥ ಸಂದರ್ಭದಲ್ಲಿ ವ್ಯಾವಹಾರಿಕ ದೃಷ್ಟಿಯಿಂದ ತಮ್ಮ ಖಡ್ಗಬಲ ಹಾಗು ತೋಳ್‌ಬಲಕ್ಕಾಗಿ ಹೆಚ್ಚು ಹಣ ಕೊಡುವವರಿಗಾಗಿ ತಮ್ಮ ಸೇವೆಯನ್ನು ಮುಡಿಪಿಡಲು ಕೆಲವರು ಮುಂದೆ ಬರುವುದುಂಟು. ಹಾಗೆ ಭಾರತಕ್ಕೆ ಬಂದವರಲ್ಲಿ ತುರ್ಕಿ ಸೈನಿಕನೊಬ್ಬನಿದ್ದ. 18ನೆಯ ಶತಮಾನದ ಮಧ್ಯದಲ್ಲಿ ಸಮರ್‌ಖಂಡ್‌ನಿಂದ ಭಾರತಕ್ಕೆ ಆಗಮಿಸಿದ ಆ ಸೈನಿಕನ ಹೆಸರು ಕುಕಾನ್‌ಬೇಗ್ ಖಾನ್, ಆತನೂ ಹಿಂದೆ ಗೌರವಪೂರ್ಣ ಜನ ಸಂಪರ್ಕವುಳ್ಳವನಾಗಿದ್ದನೆಂದೂ, ಅವನ ಪರಿವಾರವೂ ಹಿಂದೊಮ್ಮೆ ಸುಸ್ಥಿತಿಯ ದಿನಗಳನ್ನು ಕಂಡಿದ್ದಿತ್ತೆಂದೂ ತಿಳಿದು ಬರುತ್ತದೆ. ಮೊದಲು ಅವನು ಪಂಜಾಬಿನ ಗವ್ಹರ್ನರ್ ಮೋಯಿನ್-ಉಲ್-ಮುಲ್ಕನ ಸಿಬ್ಬಂದಿಯಲ್ಲಿ ಸೇರಿಕೊಂಡ. ಕೆಲ ಕಾಲದ ನಂತರ ಲಾಹೋರದಿಂದ ದೆಹಲಿಗೆ ಬಂದು ಜುಲ್ಫಿಕಾರ್ ಉದ್ದೌಲಾ ಮಿರ್ಜಾ ನಜಫ್ ಖಾನ್‌ನ ಆಶ್ರಯ ಪಡೆದ. ನಂತರ ಅವನ ಶಿಫಾರಿಸಿನಿಂದ ಶಹಾ ಆಲಮ್ ದ್ವಿತೀಯನ ಸೇವೆಯಲ್ಲಿ ಸೇರ್ಪಡೆಯಾದ. ಬಾದಶಹನು ಅವನನ್ನು ನಗಾರಿ-ನೌಬತ್ತುಗೊಳೊಂದಿಗೆ 50 ಕುದುರೆಗಳ ಸರದಾರನೆಂದು ನಿಯಮಿಸಿದ. ಅಷ್ಟಲ್ಲದೆ, ಅವನ ಸ್ವಂತದ ಹಾಗು ಅವನ ಸೈನ್ಯದ ವೆಚ್ಚಕ್ಕೆಂದು ಬಾದಶಹನು ಫಲವತ್ತಾದ ಸೀಮೆಯುಳ್ಳ ಪಹಾಸು (ಬುಲಂದಶಹರ ಜಿಲ್ಲೆ) ಜಹಗಿರಿಯನ್ನೂ ಹಾಕಿಕೊಟ್ಟ. ಹಾಗೆ ನೋಡಿದರೆ, ಈ ಸೇವಾಸವಲತ್ತುಗಳಲ್ಲಿ ವಿಶೇಷ ಆಕರ್ಷಣೆಯೂ ಇರಲಿಲ್ಲ; ಆದರಿಂದಾಗ್ಗಿ ಆತ ಬಾದಶಹನ ಸೇವೆಯಿಂದ ಹೊರಬಿದ್ದು ಜಯಪುರ ಮಹಾರಾಜನ ಸೈನ್ಯದಲ್ಲಿ ಸೇರಿಕೊಂಡ. ಜಯಪುರದಲ್ಲಿ ಅದೆಷ್ಟು ಕಾಲ ಸೇವೆಗೈದನೋ ತಿಳಿಯದು; ಆದರೆ, ಬಹುಬೇಗನೇ ಆತ ಆಗ್ರಾಕ್ಕೆ ಹೋಗಿ ನೆಲಸಿದನೆಂದು ತಿಳಿಯುತ್ತದೆ.

ಕುಕಾನ್‌ಬೇಗ್ ಖಾನ್‌ನ ಪರಿವಾರ ಬಲು ದೊಡ್ಡದಿತ್ತು. ಆದರೂ ಅವನ ಇಬ್ಬರು ಮಕ್ಕಳ ಹೆಸರುಗಳು ಮಾತ್ರ ತಿಳಿದಿವೆ: ಅಬ್ದುಲ್ಲಾ ಬೇಗ್ ಖಾನ್ ಮತ್ತು

ನಸ್ರುಲ್ಲಾ ಬೇಗ್ ಖಾನ್. ತಮ್ಮ ತಂದೆಯ ಹಾಗೆಯೇ ಅವರಿಬ್ಬರೂ ಸೈನಿಕವೃತ್ತಿಯನ್ನೇ ಸ್ವೀಕರಿಸಿದರು. ಕಿರಿಯವನಾದ ನಸ್ರುಲ್ಲಾ ಬೇಗ್ ಖಾನ್ ಮರಾಠರ ಸೇವೆಯಲ್ಲಿ ಸೇರಿಕೊಂಡು ಕ್ರಮೇಣ ಉನ್ನತಿ ಸಾಧಿಸಿ, ಗ್ವಾಲಿಯರ್ ಮಹಾರಾಜನ ಸಿಬ್ಬಂದಿಯಲಿದ್ದ ಫ್ರೆಂಚ್ ವ್ಯಕ್ತಿ ಜನರಲ್ ಪೇರೋನ ಅಧಿಕಾರದಲ್ಲಿ ಆಗ್ರಾ ಕೋಟೆಯ ಗವರ್ನರ್ ಹುದ್ದೆಗೇರಿದ.

ಹಿರಿಯಣ್ಣನಾದ ಅಬ್ದುಲ್ಲಾ ಬೇಗ್ ಖಾನ್ ಅಷ್ಟು ಸುದೈವಿಯಾಗಿರಲಿಲ್ಲ. ಆತ ಮೊದಲು ಲಖನೌಗೆ ಹೋದ. ಅದು (1775-1797) ಆಸಫ್ ಉದ್ದೌಲಾ ನವಾಬ್-ವಝೀರ್‌ನಾಗಿದ್ದ ಕಾಲ. ಅಲ್ಲಿ ಅವನಿಗೆ ಗಟ್ಟಿಯಾಗಿ ಕಾಲೂರುವ ಅವಕಾಶವಿರಲಿಲ್ಲವೆಂಬುದು ಸ್ಪಷ್ಟ. ಅಲ್ಲಿಂದ ಆತ ಹೈದ್ರಾಬಾದಕ್ಕೆ ಪಯಣ ಬೆಳೆಸಿದ. ನವಾಬ್ ನಿಜಾಮ್ ಅಲಿ ಖಾನ್ ಅಲ್ಲಿಯ ರಾಜ್ಯಾಡಳಿತ ನೋಡಿಕೊಳ್ಳುತ್ತಿದ್ದ. ಇಲ್ಲಿ ಅವನಿಗೊಂದು ಸಣ್ಣ ಕೆಲಸ ದೊರೆಯಿತು. ಹೀಗಾಗಿ ಆತ ದಕ್ಷಿಣದಲ್ಲಿ ಅನೇಕ ವರ್ಷ ಸೇವೆಯಲ್ಲಿದ್ದ. ಬಳಿಕ ನಿಜಾಮನ ದರಬಾರಿನಲ್ಲಿದ್ದ ಸರದಾರರ ಒಳ ಜಗಳಗಳ ಕಾರಣ ಆತ ಇದ್ದ ಕೆಲಸವನ್ನು ಕಳೆದುಕೊಳ್ಳಬೇಕಾಗಿ ಬಂತು. ಅಲ್ಲಿಂದ ಆತ ಅಲ್ವಾರಕ್ಕೆ ಹೋಗಿ ಅಲ್ಲಿಯ ಮಹಾರಾವ್ ಭಕ್ತಾವರ್ ಸಿಂಹನ (1791-1803) ಸೇವೆಯಲ್ಲಿ ಸೇರಿಕೊಂಡ. ದುರ್ದೈವದಿಂದ, ಅನತಿ ಕಾಲದಲ್ಲೇ ನಡೆದ ಸ್ಥಾನಿಕ ಗಲಭೆಯೊಂದನ್ನು ಹತೋಟಿಯಲ್ಲಿ ತರುವ ಪ್ರಯತ್ನದಲ್ಲೇ ಅಸು ನೀಗಿದ. ಈ ಎಲ್ಲ ವಿವರಗಳು ಗಾಲಿಬ್ ಬರೆದ ಪತ್ರವೊಂದರಲ್ಲಿ ದೊರೆಯುತ್ತವೆ. ಆತ ಬರೆಯುತ್ತಾನೆ:

*"ನನ್ನ ತಾತ ತೀರಿಕೊಂಡ ಸಮಯದಲ್ಲಿ ನಡೆದಿದ್ದ ರಾಜಕೀಯ* ಕೋಲಾಹಲದ ಕಾರಣ ಪಹಾಸು ಜಹಗಿರಿಯ ಸ್ಥಾನಪಲ್ಲಟವಾಗಿತ್ತು. ನನ್ನ ತಂದೆ ಅಬ್ದುಲ್ಲಾ ಬೇಗ್ ಖಾನ್ ಲಖನೌಗೆ ಹೋಗಿ ನವಾಬ್ ಆಸಫ್ ಉದ್ದೌಲಾನ ಸೇವೆಯಲ್ಲಿ ಸೇರಿಕೊಂಡ. ಅದಾದ ಕೆಲಕಾಲದಲ್ಲಿ ಹೈದ್ರಾಬಾದ್‌ಗೆ ಹೋಗಿ ನವಾಬ್ ನಿಜಾಮ್ ಅಲಿ ಖಾನ್‌ನ ಸೇವೆಯಲ್ಲಿ 300/400 ಅಶ್ವಾರೋಹಿಗಳ ಪ್ರಮುಖನಾಗಿ ಕೆಲಸ ಮಾಡಿದ. ಅಲ್ಲಿ ಅವನು ಸಾಕಷ್ಟು ಕಾಲ ಸೇವೆ ಸಲ್ಲಿಸಿದ. ಆದರೆ ಅದಾವುದೋ ಒಳಜಗಳದ ಕಾರಣದಿಂದಾಗಿ ಆ ಕೆಲಸವನ್ನು ಬಿಡಬೇಕಾಯಿತು. ಆದರಿಂದ ಬೇಸರಗೊಂಡು ಅವನು ಅಲ್ವಾರಕ್ಕೆ ಹೋಗಿ ಅಲ್ಲಿಯ ರಾವ್ ರಾಜಾ ಭಕ್ತಾವರ ಸಿಂಹನ ಸೇವೆಯಲ್ಲಿದ್ದಾಗ ಸ್ಥಾನಿಕ ಗಲಭೆಯೊಂದರಲ್ಲಿ ಕೊಲ್ಲಲ್ಪಟ್ಟ."

ಅಬ್ದುಲ್ಲಾ ಬೇಗ್ ಖಾನ್ ಮೊಗಲ ಸೈನ್ಯದಿಂದ ನಿವೃತ್ತನಾಗಿದ್ದ ಸೇನಾಪ್ರಮುಖ ಗುಲಾಮ್ ಹುಸೇನ್ ಖಾನ್‌ನ ಮನೆತನದ ಕನ್ಯೆಯೊಡನೆ ಮದುವೆಯಾಗಿದ್ದ. ಆತನ ಮರಣ ಸಮಯದಲ್ಲಿ ಅವನಿಗೆ ಮೂವರು ಮಕ್ಕಳಿದ್ದರು. ಒಬ್ಬ ಹೆಣ್ಣು ಮಗಳು, ಇಬ್ಬರು ಗಂಡು ಮಕ್ಕಳು. ಹಿರಿಯ ಮಗನೇ ಪ್ರಖ್ಯಾತ ಕವಿಯಾದ ಗಾಲಿಬ್. ಅವನ ಮೂಲ ಹೆಸರು ಅಸದುಲ್ಲಾ ಬೇಗ್ ಖಾನ್. ಆತ 1797ರ ಡಿಸೆಂಬರ್ 27ರಂದು ಆಗ್ರಾದಲ್ಲಿ ಜನ್ಮವೆತ್ತಿದ. ಅವನ ತಮ್ಮ ಯುಸುಫ್ ಅಲಿ ಖಾನ್ ಅವನಿಗಿಂತ ಎರಡು ವರ್ಷ ಚಿಕ್ಕವ. ಮೂವರಲ್ಲಿ ಹುಡುಗಿಯೇ ಹಿರಿಯವಳು. ಅಬ್ದುಲ್ಲಾ ಬೇಗ್ ಖಾನ್‌ನ ಮರಣಕ್ಕಿಂತ ಮುಂಚೆಯಿಂದಲೂ ಅವನ ಪರಿವಾರ ಆಗ್ರಾದಲ್ಲಿ ನೆಲಸಿತ್ತು. ಅಬ್ದುಲ್ಲಾ

ಬೇಗ್ ಖಾನ್‌ನ ಸಂಚಾರೀ ಜೀವನದಿಂದಾಗಿ ಅವನ ಪರಿವಾರ ಒಂದೆಡೆಗೆ ಗಟ್ಟಿಯಾಗಿ ನೆಲೆಯೂರುವುದೇ ಕಷ್ಟಕರವೆನಿಸಿದ್ದರಿಂದ ಗಾಲಿಬ್‌ನ ತಾಯಿ ತನ್ನ ತಂದೆ ತಾಯಿಯೊಡನೆ ಆಗ್ರಾದಲ್ಲೇ ವಾಸವಾಗಿದ್ದಳು. ಅವರು ಸಾಕಷ್ಟು ಸಿರಿವಂತರಾಗಿದ್ದರು. ಬಹಳಷ್ಟು ಸ್ಥಿರಾಸ್ತಿಯೂ ಇತ್ತು. ಅದರ ಕೆಲಭಾಗವನ್ನು ಇಂದಿಗೂ ನೋಡಬಹುದು. 1802ರಲ್ಲಿ ಅಬ್ದುಲ್ಲಾ ಬೇಗ್ ಖಾನ್ ತೀರಿಕೊಂಡ ಬಳಿಕ ಅವನ ಪರಿವಾರದ ಸಂರಕ್ಷಣೆಯ ಹೊಣೆ ಅವನ ತಮ್ಮ ನಸ್ರುಲ್ಲಾ ಬೇಗ್ ಖಾನ್‌ನ ಹೆಗಲಿಗೆ ಬಂತು. ಆಗ ಬಾಲಕ ಗಾಲಿಬನಿಗೆ ನಾಲ್ಕೇ ನಾಲ್ಕು ವರ್ಷ ವಯಸ್ಸು.

ಇದೇ ಕಾಲದಲ್ಲಿ, ಉತ್ತರ ಭಾರತದಲ್ಲಿ ಬ್ರಿಟಿಷ್ ಅಧಿಕಾರಶಾಹಿ ತೀವ್ರಗತಿಯಿಂದ ಹರಡುತ್ತಲಿತ್ತು. ಅವರು ಭಾರತದ ಸ್ಥಾನಿಕ ಸಣ್ಣ-ಪುಟ್ಟ ರಾಜ್ಯ ಹಾಗೂ ಸಂಸ್ಥಾನಗಳನ್ನು ವಶಪಡಿಸಿಕೊಂಡು ತಮ್ಮ ಆಡಳಿತದ ಹಿಡಿತವನ್ನು ಬಿಗಿಗೊಳಿಸುತ್ತ ನಡೆದಿದ್ದರು. ಆಂಗ್ಲರ ಪ್ರಧಾನ ಸೇನಾಧಿಕಾರಿ ಲಾರ್ಡ್ ಲೇಕ್ 1803ರಲ್ಲಿ ಆಗ್ರಾ ತಲುಪಿದಾಗ ನಸ್ರುಲ್ಲಾ ಬೇಗ್ ಖಾನ್ ಆಗ್ರಾ ಕೋಟೆಯ ಅಧಿಕಾರಿಯಾಗಿದ್ದ. ಅವನು ತನ್ನ ಮಡದಿಯ ಸೋದರ ನವಾಬ್ ಅಹಮ್ಮದ್ ಬಕ್ಷ್ ಖಾನ್‌ನ ಮಾತು ಕೇಳಿ, ಯಾವ ಪ್ರತಿಭಟನೆಯಿಲ್ಲದೆ, ಆಗ್ರಾ ಕೋಟೆಯನ್ನು ಲಾರ್ಡ್ ಲೇಕ್‌ನ ವಶಕ್ಕೊಪ್ಪಿಸಿದ. ಈ ಕೊಡುಗೆಗೆ ಪ್ರತಿಯಾಗಿ ಬ್ರಿಟಿಷರು ಅವನನ್ನು ನಾನೂರು ಕುದುರೆಗಳ ಅಧಿಪತಿಯನ್ನಾಗಿ ನಿಯಮಿಸಿದುದಲ್ಲದೆ, ಅವನ ಸ್ವಂತದ ಹಾಗು ಅವನ ಸೈನ್ಯದ ವೆಚ್ಚಕ್ಕಾಗಿ ಪ್ರತಿ ತಿಂಗಳು 1700 ರೂ.ಗಳ ವೇತನವನ್ನೂ ನಿಗದಿಗೊಳಿಸಿದರು. ಅದಾದನಂತರ ನಸ್ರುಲ್ಲಾ ಬೇಗ್ ಖಾನ್ ಇಂದೋರ್ ಸಂಸ್ಥಾನದಲ್ಲಿದ್ದ ಭರತಪುರದ ಹತ್ತಿರದ ಸೋಂಕ ಮತ್ತು ಸುಂಸಾ ಎಂಬೆರಡು ಜಿಲ್ಲೆಗಳನ್ನೂ ವಶಪಡಿಸಿಕೊಂಡ. ಲಾರ್ಡ್ ಲೇಕ್‌ನಿಗೆ ಈ ವಿಷಯ ತಿಳಿದೊಡನೆ ಸಂತಸಗೊಂಡು ಆತ ಆ ಎರಡೂ ಜಿಲ್ಲೆಗಳನ್ನು ನಸ್ರುಲ್ಲಾ ಬೇಗ್ ಖಾನ್‌ನ ಜೀವನಪರ್ಯಂತ ಇನಾಮು ಹಾಕಿ ಕೊಟ್ಟು ಬಿಟ್ಟ. ಅದರಿಂದಾಗಿ, ತನ್ನ ತೀರಿ ಹೋದ ಅಣ್ಣನ ಪರಿವಾರವನ್ನು ಸಾಕಿ ಸಲಹುವ ದೃಷ್ಟಿಯಿಂದ ನಸ್ರುಲ್ಲಾ ಬೇಗ್ ಖಾನ್‌ನಿಗೆ ಅನುಕೂಲವಾದಂತಾಯಿತು. ಆದರೆ ಈ ನೆಮ್ಮದಿ ಬಹುಕಾಲ ನಿಲ್ಲಲಿಲ್ಲ. 1806ರಲ್ಲಿ ಒಂದು ದಿನ ನಸ್ರುಲ್ಲಾ ಬೇಗ್ ಖಾನ್ ಆನೆಯ ಮೇಲಿಂದ ಬಿದ್ದು ವಿಪರೀತ ಪೆಟ್ಟು ತಗುಲಿ ತೀರಿಕೊಂಡ. ಆಗ ಗಾಲಿಬ್ ಮತ್ತು ಅವನ ತಮ್ಮ ಇನ್ನೂ ಎಳೆಯ ವಯಸ್ಸಿನವರು. ಅವರ ಕಕ್ಕನ ಅಕಾಲಿಕ ಮರಣದಿಂದಾಗಿ ಅವರಿಗೆ ಮತ್ತೊಮ್ಮೆ ತಬ್ಬಲಿತನದ ಸ್ಥಿತಿಯೊದಗಿ ಬಂತು.

ಅಷ್ಟು ಹೊತ್ತಿಗೆ ನವಾಬ್ ಅಹಮ್ಮದ್ ಬಕ್ಷ್ ಖಾನ್ ಫಿರೋಜಪುರದ ಝಿರಿಕಾ ಮತ್ತು ಲೋಹಾರೂ ಎಂಬೆರಡು ಸಣ್ಣ ಸಂಸ್ಥಾನಗಳ ಶಾಸಕನಾಗಿದ್ದ. ಈ ಎರಡರಲ್ಲಿ ಮೊದಲನೆಯ ಸಂಸ್ಥಾನದ ಅಧಿಕಾರ ಬ್ರಿಟಿಷರಿಂದ ದೊರೆತಿತ್ತಾದರೆ, ಎರಡನೆಯದರ ಅಧಿಕಾರ ಅಲ್ವಾರದ ಮಹಾರಾವ್ ಭಕ್ತಾವರ ಸಿಂಹನಿಂದ ದೊರೆತಿತ್ತು. ತೀರಿ ಹೋದ ನಸ್ರುಲ್ಲಾ ಬೇಗ್ ಖಾನ್‌ನೊಡನೆ ಅತ್ಯಂತ ಆತ್ಮೀಯ ಸಂಬಂಧವಿರಿಸಿಕೊಂಡಿದ್ದ ನವಾಬ್ ಆ ತಬ್ಬಲಿ ಮಕ್ಕಳ ಪಾಲನೆ-ಪೋಷಣೆಯನ್ನು ತಾನೇ ಹೊರಬೇಕೆಂದು ನಿರ್ಧರಿಸಿದನಲ್ಲದೆ, ನಸ್ರುಲ್ಲಾ ಬೇಗ್ ಖಾನ್‌ನ ಪರಿವಾರದ ವೆಚ್ಚಕ್ಕೆಂದು ವರ್ಷಕ್ಕೆ ಹತ್ತು

ಸಾವಿರ ರೂ.ಗಳ ವರ್ಷಾಶನ ಮಂಜೂರು ಮಾಡಬೇಕೆಂದು ಲಾರ್ಡ್ ಲೇಕ್‌ನ ಮನವೊಲಿಸಿದ. ಆಶ್ಚರ್ಯದ ಸಂಗತಿಯೆಂದರೆ ಆರಂಭದಲ್ಲಿ ಮಂಜೂರಾದ ಹತ್ತು ಸಾವಿರದ ರಕಮನ್ನು ಒಂದು ತಿಂಗಳಲ್ಲೇ ಐದು ಸಾವಿರಕ್ಕಿಳಿಸಿದ ಆಜ್ಞೆ ಹೊರಟಿದ್ದು. ಹೊಸ ಆಜ್ಞೆಯಲ್ಲಿ ಕಾಣಿಸಿದ 'ಹಂಚಿಕೆ' ಯೂ ಬಲು ವಿಚಿತ್ರವಾಗಿತ್ತು. ಆ ಆಜ್ಞೆಯ ಪ್ರಕಾರ ವರ್ಷಾಶನದಲ್ಲಿ ಎರಡು ಸಾವಿರ ರೂ.ಗಳಷ್ಟು ದೊಡ್ಡಪಾಲು ಖಾಜಾ ಹಾಜೀ ಎಂಬುವವರಿಗೂ, ಇನ್ನುಳಿದ ಮೂರು ಸಾವಿರ ರೂ.ಗಳು ಆ ಪರಿವಾರದಲ್ಲಿದ್ದ ಆರು ಸದಸ್ಯರಿಗೂ ಹಂಚಿ ಹೋಗಬೇಕೆಂದೂ ಆದೇಶವೀಯಲಾಗಿತ್ತು. ಹೀಗಾಗಿ ಆ ವರ್ಷಾಶನದಲ್ಲಿ ಗಾಲಿಬ್‌ನ ಪಾಲಿಗೆ ಬಂದದ್ದು ಏಳೂವರೆ ನೂರು ರೂಪಾಯಿ ಮಾತ್ರ.

ಗಾಲಿಬ್‌ನ ತಾಯಿ ಆಗಲೂ ತನ್ನ ತಂದೆ-ತಾಯಿಯೊಡನೆಯೇ ಇದ್ದಳು. ಅವಳ ತಂದೆಯ ಮರಣದ ವಿವರ ತಿಳಿದಿಲ್ಲ. ಇಸ್ಲಾಂ ಧರ್ಮದ ನಿಯಮಾನುಸಾರ ತಂದೆಯ ಮರಣದನಂತರ ಅವನ ಗಂಡು ಮಕ್ಕಳೊಡನೆ ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲು ಸಿಗಬೇಕು. ವಾಸ್ತವದಲ್ಲಿ ಎಲ್ಲರೂ ಈ ನಿಯಮಪಾಲನೆ ಮಾಡುವುದಿಲ್ಲವಾದರೂ ಸಂಪ್ರದಾಯಸ್ಥ ಮುಸ್ಲಿಮ್ ಮನೆತನಗಳಲ್ಲಿ ಅದನ್ನು ಕಟ್ಟುನಿಟ್ಟಾಗಿ ಪಾಲಿಸುವುದುಂಟು. ಅಂತೆಯೇ, ಗಾಲಿಬ್‌ನ ತಾಯಿಗೆ ತನ್ನ ತಂದೆ ಗುಲಾಮ್ ಹುಸೇನ್ ಖಾನ್ ಬಿಟ್ಟು ಹೋದ ಆಸ್ತಿಯಲ್ಲಿ ಪಾಲು ಸಿಕ್ಕಿರಬೇಕು. ಅದು ಸಾಕಷ್ಟು ದೊಡ್ಡ ಪ್ರಮಾಣದ್ದೂ ಇರಬೇಕು. ಆ ಕಾರಣ, ತನ್ನ ತಾಯಿ ಇರುವವರೆಗೂ ಗಾಲಿಬನಿಗೆ ದುಡ್ಡಿನ ಕೊರತೆಯೆಂಬುದಿರಲಿಕ್ಕಿಲ್ಲ.

# ಬಾಲ್ಯ ಮತ್ತು ಶಿಕ್ಷಣ

ಇಸ್ಲಾಂ ಧರ್ಮದಾರಂಭ ಕಾಲದಿಂದಲೂ ಕುರಾನ್ ಮುಸ್ಲೀಮ್‌ರಿಗೆ ಸಮಸ್ತ ಜ್ಞಾನದ ಕೇಂದ್ರವೆನಿಸಿತ್ತು. ಕುರಾನ್ ಹಾಗು ಧಾರ್ಮಿಕ ತತ್ವಗಳ ದೃಷ್ಟಿಯಿಂದಲೇ ಶಿಕ್ಷಣದ ಪಠ್ಯಕ್ರಮವನ್ನೂ ರೂಪಿಸಲಾಗುತ್ತಿತ್ತು. ಮಕ್ಕಳು ತಮ್ಮ ಭವಿಷತ್ಕಾಲದಲ್ಲಿ ಮೂಲ ಧಾರ್ಮಿಕ ತತ್ವಗಳನ್ನು ತಿಳಿದುಕೊಂಡು ಇಸ್ಲಾಂ ತತ್ವಗಳ ಮೂಲಕವೇ ಜೀವನದ ಸತ್ಯ-ಸೌಂದರ್ಯಗಳನ್ನರಸಲು ನೆರವಾಗುವ ವಿಷಯಗಳನ್ನು ಮಾತ್ರವೇ ಅವರಿಗೆ ಕಲಿಸಲಾಗುತ್ತಿತ್ತು. ಹಳ್ಳಿ ಹಾಗು ಪಟ್ಟಣಗಳಲ್ಲಿದ್ದ ಮಸೀದಿಯೇ ವಿದ್ಯಾಭ್ಯಾಸದ ಏಕಮೇವ ಸ್ಥಾನವಾಗಿತ್ತು. ಸಾಮೂಹಿಕ ಪ್ರಾರ್ಥನೆಯ ನೇತೃತ್ವ ವಹಿಸುತ್ತಿದ್ದ ಮೌಲ್ವಿಯೇ ತನ ಬಿಡುವಿನ ಸಮಯದಲ್ಲಿ ಶಿಕ್ಷಕನಾಗಿಯೂ ಕೆಲಸ ಮಾಡುತ್ತಿದ್ದ. ಆಸುಪಾಸಿನ ಮಕ್ಕಳೆಲ್ಲ ಪ್ರತಿದಿನ ನಿಶ್ಚಿತ ಸಮಯಕ್ಕೆ ಮಸೀದಿಯಲ್ಲಿ ಸೇರುತ್ತಿದ್ದರು. ಮೌಲ್ವಿ ಅಥವಾ ಇಮಾಮ್ ಅವರಿಗೆ ಕುರಾನ್ ಪಠಣ ಹಾಗೂ ಇನ್ನಿತರ ಆರಂಭಿಕ ಪಾಠಗಳನ್ನು ಕಲಿಸುತ್ತಿದ್ದರು. ಬರುಬರುತ್ತ ಮಕ್ಕಳು ಉನ್ನತ ಹಾಗು ವಿಶಿಷ್ಟ ವಿಷಯಗಳಲ್ಲಿ ಪರಿಣತರಾಗುವಂತೆ ಶಿಕ್ಷಣವೀಯುವ ಶಾಲೆ-ಕಾಲೇಜುಗಳನ್ನೂ ಸ್ಥಾಪಿಸಲಾಯಿತು. ಇದು, ಸಾಧಾರಣವಾಗಿ, ಎಲ್ಲ ಮುಸ್ಲೀಮ್ ದೇಶಗಳಲ್ಲೂ ನಡೆದು ಬಂದ ಕ್ರಮ.

ಮುಸ್ಲೀಮ್‌ರು ಭಾರತಕ್ಕೆ ಬಂದಾಗ ಈ ಶಿಕ್ಷಣ ಕ್ರಮವನ್ನೂ ಸಂಗಡ ತಂದರು. ಸಾಮಾನ್ಯವಾಗಿ ಇಲ್ಲಿ ಕೂಡ ಆಯಾ ಭಾಗದಲ್ಲಿದ್ದ ಮಸೀದಿಯೇ ವಿದ್ಯಾಪೀಠವೆನಿಸಿತು. ಮಕ್ಕಳೆಲ್ಲ ಮಸೀದಿಯಲ್ಲಿ ಸೇರುತ್ತಿದ್ದರು; ಮೌಲ್ವಿಯೇ ಅವರಿಗೆ ಎಲ್ಲಾ ವಿಷಯಗಳನ್ನೂ ಕಲಿಸುತ್ತಿದ್ದ. ಇಂಥ ಶಾಲೆಗೆ 'ಮಕ್ತಬ್' ಎಂದು ಕರೆಯುತ್ತಿದ್ದರು. ಈ ಸಂಸ್ಥೆ ಸಂಪೂರ್ಣವಾಗಿ ಅಳಿದು ಹೋಗಿಲ್ಲ. ಸಣ್ಣ-ಪುಟ್ಟ ಗ್ರಾಮಗಳಲ್ಲಿ ಇಂದಿಗೂ ಇಂಥ ಶಾಲೆಗಳನ್ನು ಕಾಣಬರುದು.

ಬರುಬರುತ್ತ ಉಳ್ಳವರ ಹಾಗು ಪ್ರಭಾವಶಾಲೀ ವ್ಯಕ್ತಿಗಳ ಮನೆಗಳೂ ಜ್ಞಾನಪ್ರಸಾರದ ತಾಣಗಳೆನಿಸಿದವು. ಸಿರಿವಂತನೊಬ್ಬ ಶಾಲಾ ವಯಸ್ಸಿನ ತನ್ನ ಮಗನನ್ನು ಮಸೀದಿಯಲ್ಲಿ ಸೇರುವ ನಾನಾ ಮಾದರಿಯ ಮಕ್ಕಳೊಡನೆ ಸೇರಿ ಕಲಿಯಲು ಕಳಿಸುವುದು ತನ್ನ ಮರ್ಯಾದೆಗೆ ಕುಂದೆಂದೂ ತನಗೆ ಅಗೌರವದ ಸಂಗತಿಯೆಂದೂ ಭಾವಿಸುತ್ತಿದ್ದ. ಇಂಥ ಪೇಚಿನ ಪ್ರಸಂಗವನ್ನು ತಪ್ಪಿಸಲು ಆತ ಒಬ್ಬ ಪಂಡಿತನು ತನ್ನ ಮನೆಗೇ ಬಂದು ಮಗನಿಗೆ ಕಲಿಸಿ ಹೋಗುವಂತೆ ವ್ಯವಸ್ಥೆ ಮಾಡುತ್ತಿದ್ದ. ಬರುಬರುತ್ತ ಅಂಥ ಸಿರಿವಂತನ ಸ್ನೇಹಿತರ ಹಾಗು ಸಮಾನ ದರ್ಜೆಯ ಗೃಹಸ್ಥರ ಮಕ್ಕಳೂ ತಮ್ಮ ಕಲಿಕೆಗಾಗಿ ಆ ಸಿರಿವಂತನ ಮನೆಯಲ್ಲೇ ಸೇರಲಾರಂಭಿಸಿದರು. ಹೀಗಾಗಿ, ಆ

ಸಿರಿವಂತನ ಮನೆ ಸಣ್ಣ ಶಾಲೆಯ ರೂಪಧಾರಣ ಮಾಡುತ್ತಿತ್ತು. ನಿಯಮಿತ ಶಾಲೆಗಳ ಸಂಖ್ಯೆ ಅಷ್ಟೇನೂ ದೊಡ್ಡದಾಗಿರಲಿಲ್ಲ. ಅವುಗಳಿಗೆ ಸರಕಾರದ ಧನಸಹಾಯ ದೊರೆಯುತ್ತಿತ್ತು. ಕೆಲವು ಶಾಲೆಗಳನ್ನು ನೇರವಾಗಿ ಧಾರ್ಮಿಕ ವಿಶ್ವಸ್ಥನಿಧಿಯ ಸಹಾಯದಿಂದಲೇ ನಡೆಸಲಾಗುತ್ತಿತ್ತು. ಒಮ್ಮೊಮ್ಮೆ ಒಬ್ಬೊಬ್ಬ ಸಾಹಸಿ ವಿದ್ವಾಂಸನೇ ಮುಂದಾಗಿ ತನ್ನ ಸ್ವಂತ ಮನೆಯಲ್ಲೇ ಶಾಲೆ ತೆರೆದದ್ದೂ ಉಂಟು. ಅವನೂ, ಅವನ ವಿದ್ವಾಂಸಮಿತ್ರರೂ ಸೇರಿ ಶಾಲಾಸಿಬ್ಬಂದಿಯಾಗಿ ಅವನಲ್ಲಿ ವಿಶ್ವಾಸವುಳ್ಳವರ ಮಕ್ಕಳಿಗೆಲ್ಲ ವಿದ್ಯಾದಾನ ಮಾಡುತ್ತಿದ್ದರು.

ಗಾಲಿಬನ ಶಿಕ್ಷಣದ ಬಗ್ಗೆ ದೊರೆತಿರುವ ಅಧಿಕೃತ ಮಾಹಿತಿ ಅತ್ಯಲ್ಪ. ನಮಗೆ ತಿಳಿದಿರುವಂತೆ, ಆಗ ಆಗ್ರಾದಲ್ಲಿ ಮೊಹಮ್ಮದ್ ಮುಅಜ್ಜಮ್ ಎಂಬ ಪ್ರಸಿದ್ಧ ವಿದ್ವಾಂಸನೊಬ್ಬ ಶಾಲೆ ನಡೆಸುತ್ತಿದ್ದ. ಗಾಲಿಬ್ ಈ ಶಾಲೆಗೆ ಹೋಗುತ್ತಿದ್ದ. ಆಗ ಪರ್ಶಿಯನ್ (ಫಾರ್ಸಿ) ಭಾಷೆಯೊಂದೇ ರಾಜ್ಯಭಾಷೆಯಾಗಿತ್ತು. ಸಮಸ್ತ ಪತ್ರವ್ಯವಹಾರ ಹಾಗು ಸಾಹಿತ್ಯಕೃಷಿಯೆಲ್ಲ ಈ ಭಾಷೆಯ ಮೂಲಕವೇ ನಡೆಯುತ್ತಿತ್ತು. ಅಂತೆಯೇ ಆಗಿನ ಪಠ್ಯ-ಪುಸ್ತಕಗಳೆಲ್ಲ ಸ್ವಾಭಾವಿಕವಾಗಿ ಪರ್ಶಿಯನ್ ಭಾಷೆಯಲ್ಲೇ ಇದ್ದವು. ಉರ್ದುಭಾಷೆಗಿನ್ನೂ ಶಿಕ್ಷಣದ ಮಾಧ್ಯಮವಾಗಬಲ್ಲ ಸ್ಥಿತಿಯುಂಟಾಗಿರಲಿಲ್ಲ. ಗಾಲಿಬ್ ತನ್ನ ಶಾಲಾದಿನಗಳಲ್ಲಿ ಪರ್ಶಿಯನ್ ಭಾಷೆಯನ್ನೇ ಕಲಿತ. 20ನೇ ಶತಮಾನದ ಆದಿಯವರೆಗೂ ಈ ಪರಿಸ್ಥಿತಿಯೇ ಪ್ರಚಲಿತವಿತ್ತು. ಶಾಲೆಯಲ್ಲಿ ಕಲಿಯುವಾಗಲೇ ಗಾಲಿಬ್ ಕೆಲವು ಶ್ರೇಷ್ಠ ದರ್ಜೆಯ ಪರ್ಶಿಯನ್ ಲೇಖಕ-ಕವಿಗಳ ಗದ್ಯ-ಪದ್ಯ ಗ್ರಂಥಗಳನ್ನು ಓದಿದ್ದನೆಂದು ಹೇಳಲಾಗುತ್ತದೆ. ಆರಂಭಿಕ ಹಂತದಲ್ಲಿ ಅಲ್ಪಸ್ವಲ್ಪ ಅರೆಬಿಕ್ ಭಾಷಾಜ್ಞಾನವನ್ನೂ ಮಾಡಿ ಕೊಡಲಾಗುತ್ತಿತ್ತು. ಗಾಲಿಬನ ಅರೆಬಿಕ್ ಭಾಷಾಜ್ಞಾನ ಕೂಡ ಆ ಪರಿಮಿತಿಯಲ್ಲೇ ಇದ್ದಿರಬೇಕು. ಅವನು ಈ ಶಾಲೆಯಲ್ಲಿ ಪ್ರಾಯಶಃ ತನ್ನ 12ನೇ ವಯಸ್ಸಿನವರೆಗೆ ವಿದ್ಯಾಭ್ಯಾಸ ಮಾಡಿರಬೇಕು.

ಗಾಲಿಬನ ಬರೆಹದಿಂದಲೇ ತಿಳಿಯುವಂತೆ, ಈ ಸುಮಾರಿಗೆ ಅಬ್ದುಲ್ ಸಮದ್ ಎಂಬ ಪರ್ಶಿಯನ್ ವಿದ್ವಾಂಸನೊಬ್ಬ ಆಗ್ರಾಕ್ಕೆ ಆಗಮಿಸಿದ. ಅಬ್ದುಲ್ ಸಮದ್‌ನ ಜನ್ಮ ಝೋರೋಸ್ಟ್ರಿಯನ್ ಮತದ ಮನೆತನದಲ್ಲಾಗಿದ್ದರೂ ಅವನ ಸ್ವಾಧ್ಯಾಯದ ಪ್ರೇರಣೆಯಿಂದ ಅವನು ಇಸ್ಲಾಂ ಧರ್ಮವನ್ನು ಸ್ವೀಕರಿಸಿದ್ದನು. ಅವನಿಗೆ ಪರ್ಶಿಯನ್ ಹಾಗು ಅರಬ್ಬಿ ಭಾಷೆಗಳೆರಡರ ಮೇಲೂ ಸಮಾನ ಪ್ರಭುತ್ವವಿತ್ತು. ಅಂತೆಯೇ ಅವನ ಝೋರೋಸ್ಟ್ರಿಯನ್ ಹಾಗು ಇಸ್ಲಾಂ ಧರ್ಮಗಳೆರಡರ ಜ್ಞಾನವೂ ಅಗಾಧವಾದುದಾಗಿತ್ತು. ಈ ಯುವಕ ಕವಿ ಮನದ ಮೇಲೆ ಈ ವಿದ್ವಾಂಸ-ಪ್ರಯಾಣಿಕನ ಗಾಢವಾದ ಪ್ರಭಾವ ಬಿದ್ದು ಅವನು ತನ್ನ ಮನೆಯಲ್ಲಿಯೇ ಎರಡು ವರ್ಷ (1810-12) ವಾಸಿಸಲು ಒತ್ತಾಯಿಸುವಂತಾಯ್ತು. ಈ ಕಾಲಾವಧಿಯಲ್ಲಿ ಆತ ಈ ವಿದ್ವಾಂಸನ ಮಾರ್ಗದರ್ಶನದಿಂದ, ತನ್ನ ಮುಂದಿನ ದಿನಗಳಲ್ಲಿ ದಾರಿದೀಪವಾಗಬಹುದಾದ ಬಹಳಷ್ಟು ಜ್ಞಾನಸಂಪಾದನೆ ಮಾಡಿಕೊಂಡ. 1812-13ರಲ್ಲಿ ಅವರಿಬ್ಬರೂ ಆಗ್ರಾ ಬಿಟ್ಟು ಒಂದೇ ದಿಕ್ಕಿಗೆ ಹೊರಟರು - ದೆಹಲಿಗೆ. ಗಾಲಿಬ್ ಹೊರಟದ್ದು ದೆಹಲಿಯನ್ನೇ ತನ್ನ ಮನೆ ಮಾಡಿಕೊಂಡಿರಲು, ಅಬ್ದುಲ್ ಸಮದ್

ಹೊರಟದ್ದು ತನ್ನ ಶಿಷ್ಯ ಹಾಗು ಯುವಕ ಕವಿಯಿಂದ ವಿದಾಯ ಪಡೆಯಲು. ಗಾಲಿಬ್ ಬಲು ಪ್ರಯತ್ನಶೀಲ ಹಾಗು ಕುಶಾಗ್ರಮತಿಯ ಶಿಷ್ಯನಾಗಿದ್ದು ತನ್ನ ಗುರು ಭಾರತದಿಂದ ಹೊರಟು ಹೋದ ನಂತರವೂ ಅವನೊಡನೆ ಪತ್ರವ್ಯವಹಾರ ಮಾಡುವುದನ್ನು ನಿಲ್ಲಿಸಲೇ ಇಲ್ಲವೆಂದು ತಿಳಿಯುತ್ತದೆ.

## ದೆಹಲಿಗೆ ಆಗಮನ

ಗಾಲಿಬ್ ಆಗ್ರಾ ತೊರೆದು ದೆಹಲಿಗೆ ಬಂದು ನೆಲೆಯೂರಲು ಏನು ಕಾರಣವೆಂದು ನಮಗೆ ತಿಳಿದಿಲ್ಲ. ಶಹಜಹಾನ್ ದೊರೆಯ ಕಾಲದವರೆಗೂ ಆಗ್ರಾ ಮೊಗಲ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಶಹಜಹಾನ್ ದೆಹಲಿಯಲ್ಲಿ ಕೆಂಪು ಕೋಟೆಯನ್ನು ಕಟ್ಟಿಸಿ 1646ರಲ್ಲಿ ಮೊಗಲ್ ರಾಜಧಾನಿಯನ್ನು ಆಗ್ರಾದಿಂದ ದೆಹಲಿಗೆ ಸ್ಥಳಾಂತರಿಸಿದನು. ಆಗ್ರಾ ಅನಂತರವೂ ಮೊಗಲ ಸಾಮ್ರಾಜ್ಯದ ಮಹತ್ವದ ನಗರವಾಗಿಯೇನೋ ಉಳಿಯಿತು; ಆದರೆ ಅದು ದೆಹಲಿಗೆ ಸರಿಸಾಟಿಯೆನಿಸುವಂತಿರಲಿಲ್ಲ. ಪ್ರಾಯಶಃ ಹೀಗೆ ಕೇಂದ್ರ ಸ್ಥಾನವೆನಿಸಿದ ದೆಹಲಿ ಗಾಲಿಬನ ಕಣ್ಣನ ಸೆಳೆದಿರಬಹುದು; ಆತ ಅಲ್ಲಿಯೇ ಕೊನೆಯವರೆಗೆ ನೆಲೆಯೂರಿ ನಿಲ್ಲಲು ನಿಶ್ಚಯಿಸಿರಬಹುದು. ಅದಕ್ಕೆ ಮತ್ತೊಂದು ಕಾರಣವಿದ್ದರೂ ಇದ್ದೀತು. 1810ರ ಆಗಸ್ಟ್ ತಿಂಗಳಲ್ಲಿ ಗಾಲಿಬ್ 13 ವರ್ಷದವನಿದ್ದಾಗ, ಫಿರೋಜಪುರ ಝಿರಕಾ ಮತ್ತು ಲೋಹಾರೂ ಸಂಸ್ಥಾನದ ನವಾಬ್ ಅಹಮ್ಮದ ಬಕ್ಷ್ ಖಾನ್‌ನ ತಮ್ಮ ಇಲಾಹಿ ಭಕ್ಷ್ ಖಾನ್‌ನ ಮಗಳೊಡನೆ ಅವನ ವಿವಾಹವಾಗಿತ್ತು. ಆ ಪರಿವಾರ ಮೊದಲಿನಿಂದ ದೆಹಲಿಯಲ್ಲೇ ಇರುತ್ತಿದ್ದು, ಗಾಲಿಬನೂ ದೆಹಲಿಗೆ ಬಂದು ಬಿಡಬೇಕೆಂದು ಅವರು ಅವನ ಮನವೊಲಿಸಿರಲೂ ಸಾಕು.

ಲೋಹಾರೂ ಶಾಸಕವಂಶದ ಮೊದಲಿಗನೆಂದರೆ ನವಾಬ್ ಅಹಮ್ಮದ್ ಬಕ್ಷ್ ಖಾನ್. ಅವನ ತಂದೆ ಮಿರ್ಝಾ ಆರೀಫ್ ಖಾನ್ ತನ್ನಿಬ್ಬರು ಸೋದರಸಮೇತನಾಗಿ ಹದಿನೆಂಟನೆಯ ಶತಮಾನದ ಮಧ್ಯದಲ್ಲಿ - ಅಂದರೆ ಗಾಲಿಬ್‌ನ ತಾತ ಕುಕಾನ್ ಬೇಗ್ ಖಾನ್ ಮಧ್ಯ ಏಶಿಯಾದಿಂದ ಭಾರತಕ್ಕೆ ವಲಸೆ ಬಂದ ಕಾಲದಲ್ಲೇ - ಬಂದವನೆಂದು ತಿಳಿದು ಬರುತ್ತದೆ. ಈಗಾಗಲೇ ಹೇಳಿರುವಂತೆ, ನವಾಬ್ ಅಹಮ್ಮದ್ ಬಕ್ಷ್‌ನ ಸೋದರಿಯೊಡನೆ ಗಾಲಿಬನ ಕಕ್ಕ ನಸ್ರುಲ್ಲಾಬೇಗ್ ಖಾನ್‌ನ ಮದುವೆಯೂ ಆಗಿತ್ತು. ಈ ಹಿನ್ನೆಲೆಯಲ್ಲಿ ಈ ಎರಡೂ ಮನೆತನಗಳ ನಿಕಟ ಸಂಬಂಧ ಮುಂದುವರಿಯಬೇಕೆಂದೂ, ಮತ್ತೊಂದು ಮದುವೆಯಿಂದ ಅದು ಮತ್ತಿಷ್ಟು ಬಲಗೊಳ್ಳಬಹುದೆಂದೂ ಅವರಿಗೆನಿಸಿದ್ದು ಸ್ವಾಭಾವಿಕ.

ಆರಂಭದಲ್ಲಿ ಅಹಮ್ಮದ್ ಬಕ್ಷ್ ಖಾನ್ ದೊಡ್ಡ ಪ್ರಮಾಣದಲ್ಲಿ ಕುದುರೆಗಳ ವ್ಯವಹಾರ ಮಾಡುತ್ತಿದ್ದ. ಕೆಲಕಾಲದಲ್ಲೇ ಅವನಿಗೆ ಗ್ವಾಲಿಯರ್ ಮಹಾರಾಜನ ಪರಿಚಯವಾಗಿ ತನ್ನ ವ್ಯವಹಾರವನ್ನು ನಿಲ್ಲಿಸಿ ಬಿಟ್ಟ. ಆದರೆ ಮಹಾರಾಜನೊಡನೆ ಆತ ಬಹುಕಾಲ ನಿಲ್ಲದೆ, ಅಲ್ವಾರಕ್ಕೆ ಹೋದ. ಅಲ್ಲಿ ಅವನು ಬಲು ಬೇಗನೇ ಅಲ್ವಾರ್ ದೊರೆಯ ಪೂರ್ಣ ವಿಶ್ವಾಸ ಗಳಿಸಿಕೊಂಡು ಪ್ರಮುಖ ಸೇನಾಧಿಕಾರಿಯ ಪದಕ್ಕೇರಿದ.

ಮರಾಠರ ವಿರುದ್ಧ ಹೋರಾಡುತ್ತಿದ್ದ ಲಾರ್ಡ್ ಲೇಕ್‌ನ ಸಹಾಯಕ್ಕೆಂದು ಕಳಿಸಲ್ಪಟ್ಟ ಅಲ್ವಾರ್ ಸೈನ್ಯದ ನೇತೃತ್ವ ವಹಿಸಿ ತನ್ನ ಕಾರ್ಯದಕ್ಷತೆಗಾಗಿ ಮೆರೆದ. ತನ್ನ ಕಾರ್ಯ ಹಾಗು ಸೂಕ್ತ ನಿರ್ಣಾಯಕ ಸಾಮರ್ಥ್ಯದಿಂದಾಗಿ ಲಾರ್ಡ್ ಲೇಕ್‌ನ ದೃಷ್ಟಿಯಲ್ಲಿ ಅತ್ಯಂತ ಮಹತ್ವದ ಶಕ್ತಿಯೆನಿಸಿದ. ಈ ಮಹತ್ವ ಎಷ್ಟು ಬೆಳೆಯಿತೆಂದರೆ, ಭಾರತೀಯ ಸಂಸ್ಥಾನಗಳ ಮತ್ತು ಸಂಸ್ಥಾನಿಕರ ಕುರಿತು ಕೈಕೊಳ್ಳುವ ಪ್ರತಿಯೊಂದು ನಿರ್ಣಯದಲ್ಲೂ ಲಾರ್ಡ್ ಲೇಕ್ ಅಹಮ್ಮದ್ ಬಕ್ಷ್ ಖಾನ್‌ನ ಸಲಹೆ ಪಡೆದುಕೊಂಡೇ ಮುಂದುವರಿಯುತ್ತಿದ್ದ. 1803ರಲ್ಲಿ ಲಾರ್ಡ್ ಲೇಕ್ ಪಶ್ಚಿಮ ಉತ್ತರ ಪ್ರದೇಶದ ಬಹುಭಾಗವನ್ನು ವಶಪಡಿಸಿಕೊಂಡಾಗ ಅವನು ಅಹಮ್ಮದ್ ಬಕ್ಷ್ ಖಾನ್‌ನಿಗೆ ಫಿರೋಜಪುರ ಝಿರಕಾ, ಪಲ್ವಲ್, ಹೋಡಾಲ್ ಮುಂತಾದ ಜಿಲ್ಲೆಗಳ ಇನಾಮು ಹಾಕಿ ಕೊಟ್ಟ. ಈ ಸಂದರ್ಭದಲ್ಲಿ ಸೇರಿದ ವಿಶೇಷ ದರಬಾರ್‌ನಲ್ಲಿ ಉಪಸ್ಥಿತನಾಗಿದ್ದ ಅಲ್ವಾರದ ಮಹಾರಾವ್‌ನೂ ಅಹಮ್ಮದ್ ಬಕ್ಷ್ ಖಾನ್‌ನ ನಿಷ್ಠಾಪೂರ್ಣ ಹಾಗು ಸಮರ್ಥ ಸೇವೆಯ ಪ್ರಶಂಸೆಯ ರೂಪದಲ್ಲಿ ಅವನಿಗೆ ಲೋಹಾರೂ ಸಂಸ್ಥಾನದ ಇನಾಮು ಜಾಹೀರು ಮಾಡಿದ. ಹೀಗೆ, ಅಹಮ್ಮದ್ ಬಕ್ಷ್ ಖಾನ್ ಫಿರೋಜಪುರ ಝಿರಕಾ ಮತ್ತು ಲೋಹಾರೂ ಸಂಸ್ಥಾನಗಳ ಪ್ರಥಮ ಶಾಸಕನಾದ.

ನವಾಬ್ ಅಹಮ್ಮದ್ ಬಕ್ಷ್ ಖಾನ್‌ನ ರಾಜಧಾನಿ ಫಿರೋಜಪುರವಾಗಿದ್ದರೂ ಬ್ರಿಟಿಷರಿಗೆ ಉತ್ತರಭಾಗದ ಜಿಲ್ಲೆಗಳ ಆಡಳಿತ ಕೇಂದ್ರವೆಂದೆನಿಸಿಕೊಂಡ ದೆಹಲಿಯಲ್ಲೇ ಅವನು ಬಹುಕಾಲ ವಾಸವಾಗಿರುತ್ತಿದ್ದ. ನವಾಬನ ತಮ್ಮ ಇಲಾಹಿ ಬಕ್ಷ್ ಖಾನ್‌ನಂತೂ ದೆಹಲಿಯ ಖಾಯಂ ನಿವಾಸಿಯೇ ಆಗಿದ್ದ. ಇಲಾಹಿ ಬಕ್ಷ್ ಖಾನ್ ಪ್ರಸಿದ್ಧ ಕವಿಯಾಗಿದ್ದನಲ್ಲದೆ ಧಾರ್ಮಿಕ ವರ್ತುಲದಲ್ಲೂ ವರ್ಚಸ್ಸುಳ್ಳವನಾಗಿದ್ದ. ಅವನು 'ಮಾರೂಫ್' ಎಂಬ ಕಾವ್ಯನಾಮದಿಂದ ಉರ್ದು ಭಾಷೆಯಲ್ಲಿ ಕಾವ್ಯರಚನೆ ಮಾಡುತ್ತಿದ್ದ.

## ಉರ್ದು ಭಾಷೆ

ಭಾರತದ ಜನತೆಯೊಡನೆ ಮುಸ್ಲೀಮರ ಸಂಪರ್ಕ ಬೆಳೆಯುತ್ತ ಹೋದಂತೆ ಇಲ್ಲಿ ಉರ್ದು ಭಾಷೆಯ ಉಗಮ ಹಾಗು ವಿಕಾಸಕ್ಕೆ ತಕ್ಕ ಪುಟ ದೊರೆಯುತ್ತ ಹೋಯಿತು. ಯಾವುದೊಂದು ಭಾಷೆ ತನ್ನ ಪರಿಪೂರ್ಣಾವಸ್ಥೆಗೆ ತಲುಪುವ ಮುನ್ನ ವಿಕಾಸಕ್ರಮದ ಹಲವೊಂದು ಹಂತಗಳನ್ನು ದಾಟಬೇಕಾಗುತ್ತದೆ. ಉತ್ತರ ಭಾರತದಲ್ಲಿ ಇಂಥ ಪ್ರಕ್ರಿಯೆ ಬಹುಕಾಲದಿಂದ ನಡೆದು ಹೊಸ ಭಾಷೆಯೊಂದು ರೂಪುಗೊಳ್ಳುವುದು ಅನಿವಾರ್ಯವೆಂಬಂಥ ಹಂತಕ್ಕೆ ತಲುಪಿತ್ತು. ಯೋಗಾಯೋಗವೆಂಬಂತೆ, ಇದೇ ಸಂದರ್ಭದಲ್ಲಿ ಮುಸ್ಲೀಮರೂ ಈ ಪ್ರಕ್ರಿಯೆಯಲ್ಲಿ ಕೈಗೂಡಿಸಿದರು. ಆರ್ಯನ್ ಭಾಷಾಸಮೂಹದಲ್ಲೇ ಅಧಿಕ ಸಮೃದ್ಧ ಸಾಹಿತ್ಯಿಕ ಪರಂಪರೆ ಹಾಗು ವಿಜಯೀ ದೊರೆಗಳ ಭಾಷೆಯೆಂಬ ವಿಶೇಷ ಮರ್ಯಾದೆಯುಳ್ಳ ಪರ್ಶಿಯನ್ ಭಾಷೆಯನ್ನು ಅವರು ಸಂಗಡ ತಂದರು. ಸ್ವಾಭಾವಿಕವಾಗಿಯೇ ಇಲ್ಲಿಯೂ ಪರ್ಶಿಯನ್ ಭಾಷೆಯೇ

ರಾಜ್ಯಭಾಷೆಯಾಗಿ ಮೆರೆಯಿತು. ದೊರೆಗಳ ಹಾಗು ಶಾಸಕರ ಮೆಚ್ಚಿಗೆ ಗಳಿಸಿ ವಿವಿಧ ಸೇವಾರಂಗಗಳಲ್ಲಿ ಸೇರಿಕೊಳ್ಳಲು ಅನುಕೂಲವೆಂಬ ದೃಷ್ಟಿಯಿಂದ ಸುಶಿಕ್ಷಿತ ವರ್ಗದ ಜನ ಹೆಚ್ಚು ಹೆಚ್ಚಾಗಿ ಪರ್ಶಿಯನ್ ಭಾಷೆ ಕಲಿಯತೊಡಗಿದರು. ಹೀಗೆ ಭಾಷಿಕ ಕಡಾಯಿಯಲ್ಲಿ ಬಹುಕಾಲ ಕುದಿಯುತ್ತಿದ್ದ ಪ್ರವಾಹೀ ಪದಾರ್ಥ ಪರ್ಶಿಯನ್ ಭಾಷೆಯ ಕಾವಿನಿಂದ ಕೆನೆಗೊಂಡು ಹೊಸ ಭಾಷೆಯ ರೂಪಧಾರಣ ಮಾಡಿತು. ಅದುವೇ ಮುಂದೆ ಉರ್ದು ಭಾಷೆಯೆಂದು ಹೆಸರಾಯಿತು. ಒಟ್ಟಿನಲ್ಲಿ, ಆಗ ಹೊಸ ಭಾಷೆಯೊಂದು ಮೂಡಿಕೊಳ್ಳುವುದೇ ಇತ್ತು. ಯಾಕೆಂದರೆ ಅದರ ಜನನಕ್ಕೆ ಅಗತ್ಯವಾಗಿದ್ದ ಪ್ರಕ್ರಿಯೆ ಪೂರ್ಣಗೊಂಡಿತ್ತು. ಹದಗೊಂಡು ನಿಂತ ಭೂಮಿಗೆ ಮಳೆಯು ಸೆಳಕೊಂದು ಬೇಕಿತ್ತು. ಉತ್ತರ-ಪಶ್ಚಿಮ ಸೀಮೆಗಳನ್ನು ದಾಟಿ ಬಲು ಉತ್ಸಾಹದಿಂದಲೇ ಭಾರತಕ್ಕೆ ಬಂದ ಮುಸ್ಲೀಮ್‌ರಿಂದ ಈ ಆವಶ್ಯಕತೆ ಪೂರೈಸಿದಂತಾಯಿತು. ಹೀಗೆ ಹುಟ್ಟಿಗೊಂಡ ಹೊಸ ಭಾಷೆ ತನ್ನ ಶಬ್ದಸಂಪತ್ತು, ವಾಕ್‌ಸರಣಿ, ವ್ಯಾಕರಣಾದಿ ದೃಷ್ಟಿಗಳಿಂದ ಅಪ್ಪಟ ಭಾರತೀಯವೇ ಆಗಿತ್ತು. ಹಾಗೆ ನೋಡಿದರೆ ಉರ್ದು ಲಪಿಗೆ ಮುಸ್ಲೀಮ್‌ರ ಕೊಡುಗೆ ಸೀಮಿತವಾದದ್ದೆ. ಕೆಲವು ಪರ್ಶಿಯನ್ ಶಬ್ದಗಳನ್ನು, ಕೆಲವು ಇರಾನೀ ಪರಿಕಲ್ಪನೆ ಹಾಗು ವಾಕ್‌ಸರಣಿಗಳನ್ನು ಅವರು ಬೆರೆಸಿದರು, ಅಷ್ಟೆ.

ಆರಂಭದಲ್ಲಿ ಮುಖ್ಯವಾಗಿ ಧಾರ್ಮಿಕ ಚರ್ಚೆ ಹಾಗು ಮುಸ್ಲೀಮ್ ಸಂತರ ವಿಚಾರಗಳ ಪ್ರಚಾರಕ್ಕೆ ಈ ಭಾಷೆಯನ್ನು ಬಳಸಲಾಗುತ್ತಿತ್ತು. ಮೊದಮೊದಲಿನ ಉರ್ದು ಗದ್ಯ-ಪದ್ಯ ರಚನೆಗಳಲ್ಲಿ ನೀತಿ ಹಾಗು ಧಾರ್ಮಿಕ ತತ್ವಗಳೇ ಹೆಚ್ಚಾಗಿ ಅಡಕಗೊಂಡಿದ್ದವು. ಬಹುಸಂಖ್ಯೆ ಉರ್ದು ಲೇಖಕರು ಪರ್ಶಿಯನ್ ವಿದ್ವಾಂಸರಾಗಿದ್ದ ಕಾರಣ ಅವರ ಬರೆಹದಲ್ಲಿ ಪರ್ಶಿಯನ್ ಪರಿಕಲ್ಪನೆ ಹಾಗು ವಿಚಾರಸರಣಿಯೇ ಹೆಚ್ಚಾಗಿ ತುಂಬಿಕೊಳ್ಳುವುದು ಸ್ವಾಭಾವಿಕವಾಗಿತ್ತು. ಕಾಲ ಕಳೆದಂತೆ, ಉರ್ದುಭಾಷೆ ಹೆಚ್ಚು ಹದಗೊಂಡು ಪರ್ಶಿಯನ್ ಭಾಷೆಯ ಉತ್ಕೃಷ್ಟ ಕೃತಿಗಳಿಂದ ಮಾತ್ರವೇ ವ್ಯಾಪಕವಾದ ರೀತಿಯಲ್ಲಿ ವಿಚಾರಗಳನ್ನು ಬಳಸಿಕೊಳ್ಳುವ ಕ್ರಮ ರೂಢಿಯಲ್ಲಿ ಬಂತು. ಆದರೆ ಈ ಕ್ರಮವೂ ಕೃತಕವೆನಿಸತೊಡಗಿತು. ಯಾಕೆಂಧರೆ, ಹೀಗೆ ಪರ್ಶಿಯನ್ ವಿಚಾರಧಾರೆ ಅಥವಾ ಉಪಮೆ-ಉಪಮಾನಗಳನ್ನು ಬಳಸುವ ಭಾರತೀಯ ಉರ್ದು ಕವಿಗಳೆಂದೂ ಇರಾನಿಗೆ ಹೋದವರಲ್ಲ; ಹಿಂದಿನ ಶ್ರೇಷ್ಠ ಗ್ರಂಥಗಳನ್ನಲ್ಲದೆ, ಅಲ್ಲಿಯ ಜನಜೀವನವನ್ನು ಕಣ್ಣಾರೆ ಕಂಡವರಲ್ಲ. ಅಂತೆಯೇ ಅವರ ಕಾವ್ಯ ಕೇವಲ ಕಾಲ್ಪನಿಕ ಹಾಗು ಕೃತಕ ಕಾವ್ಯವೆನಿಸಿತು. ಆದರೆ, ಮೀರ್, ದರ್ದ್ ಅವರಂಥ ಕೆಲವರು ಮಾತ್ರ ಈ ಮಾತಿಗೆ ಅಪವಾದವೆನಿಸಿದರು. ಆಗಿನ ಬಹಳಷ್ಟು ಉರ್ದುಕವಿಗಳ ರಚನೆಗಳಲ್ಲಿ ಸ್ವೋಪಜ್ಞತೆಯಾಗಲಿ, ತಾಜಾತನವಾಗಲಿ ಇರಲಿಲ್ಲ. ಯಾರು ಬರೆದರೂ ಒಂದೇ ಥರ, ಒಂದೇ ಸ್ವರ.

# ಕವಿಯ ಮೊದಲ ಹೆಜ್ಜೆಗಳು

ಗಾಲಿಬ್ ಆಗ್ರಾದಲ್ಲಿರುವಾಗಲೇ ಕಾವ್ಯರಚನೆಗೆ ತೊಡಗಿದ. ಆರಂಭದ ಹಂತದಲ್ಲಿ ಆತ ಪರ್ಶಿಯನ್ ಮತ್ತು ಉರ್ದು ಈ ಎರಡೂ ಭಾಷೆಗಳಲ್ಲಿ ಬರೆಯುತ್ತಿದ್ದ. ಆದರೆ ಕೆಲ ಕಾಲದಲ್ಲೇ ಆತ ಪರ್ಶಿಯನ್ ಭಾಷೆಯ ಮೋಹದಿಂದ ಮುಕ್ತನಾಗಿ, ಸುಶಿಕ್ಷಿತ ವರ್ಗಗಳಲ್ಲಿ ನೆಲೆಗೊಂಡು ದಿನೇ ದಿನೇ ಜನಪ್ರಿಯವಾಗುತ್ತ ನಡೆದಿದ್ದ ಉರ್ದು ಭಾಷೆಯ ಮೇಲೆಯೇ ತನ್ನ ಸೃಜನಶೀಲ ಶಕ್ತಿಯನ್ನು ಕೇಂದ್ರೀಕರಿಸಿದ. ಅವನ ವಿದ್ಯಾಭ್ಯಾಸ ಮುಖ್ಯವಾಗಿ ಶ್ರೇಷ್ಠ ದರ್ಜೆಯ ಪರ್ಶಿಯನ್ ಕೃತಿಗಳನ್ನೇ ಆಧರಿಸಿದುದಾಗಿತ್ತು. ಮುಂದೆ ಅಬ್ದುಸ್ ಸಮದ್‌ನ ಸಂಪರ್ಕದಲ್ಲಿ ಅವನ ಪರ್ಶಿಯನ್ ಪಾಂಡಿತ್ಯ ಹಾಗು ಪರ್ಶಿಯನ್ ಭಾಷಾಪ್ರೇಮ ಇನ್ನೂ ಪ್ರಖರಗೊಂಡಿತ್ತು. ಬಾಲ್ಯದಿಂದಲೂ ಆತ ಶೌಕತ್ ಬುಖಾರಿ, ಅಸೀರ್ ಹಾಗು ಬೇದಿಲ್‌ರಂಥ ಪರ್ಶಿಯನ್ ಕವಿಗಳ ಪ್ರಭಾವಕ್ಕೂ ಒಳಗಾಗಿದ್ದ. ಇವರು ತಮ್ಮ ಸಂಕೀರ್ಣ ಮತ್ತು ಕಲ್ಪನಾಪೂರ್ಣ ಬರವಣಿಗೆಗಾಗಿ ಹೆಸರಾದ ಕವಿಗಳು. ಗಾಲಿಬ್ ಅವರ ಬರವಣಿಗೆಯ ಶೈಲಿಯನ್ನು ಉರ್ದು ಭಾಷೆಯಲ್ಲಿ ಅಳವಡಿಸಲು ಆರಂಭಿಸಿದ. ಆಗಿನ್ನೂ ಉರ್ದು ಎಳೆಯ ಭಾಷೆ. ಅದಕ್ಕೆ ಹೇಳಿಕೊಳ್ಳುವಂಥ ಶಬ್ದಸಂಪತ್ತಿಯೂ ಇರಲಿಲ್ಲ, ಅವನ ಕಲ್ಪನೆಗಳನ್ನು ಕನ್ನಡಿಸುವ ವಾಕ್‌ಸರಣಿಯೂ ಇರಲಿಲ್ಲ. ಪರ್ಶಿಯನ್ ಭಾಷೆಯಲ್ಲಿ ವಸ್ತು ಹಾಗು ವಿನ್ಯಾಸಗಳೆರಡರ ದೃಷ್ಟಿಯಿಂದಲೂ ಅಗಮ್ಯ ಹಾಗು ಅನುಕರಣೆಗೆ ಅಸಾಧ್ಯವೆನಿಸಿದ ಬೇದಿಲ್‌ರಂಥ ಕವಿಗಳಿಂದ ಪ್ರೇರಣೆ ಪಡೆದು ಅಂಥ ಪ್ರಯೋಗಗಳನ್ನೇ ಮಾಡಹೊರಟ ಗಾಲಿಬನಿಗೆ ಉರ್ದು ಭಾಷೆ ಬಲು ಅಸಮರ್ಪಕವೆನಿಸಿತು. ಅಂತೆಯೇ ಪರಿಣಾಮ ಸಮಾಧಾನಕರವಾಗಲಿಲ್ಲ. ಗಾಲಿಬನ ಆರಂಭಿಕ ಕಾವ್ಯದುದ್ದಕ್ಕೂ ಅಲ್ಲಿ-ಇಲ್ಲಿ ಕಾಣುವ ಒಂದೊಂದು ಉರ್ದು ಶಬ್ದಗಳನ್ನು ಬಿಟ್ಟರೆ ಪರ್ಶಿಯನ್ ಭಾಷೆ ತಾನೇ ತಾನಾಗಿ ವಿಜೃಂಭಿಸಿದ್ದು ಕಂಡು ಬರುತ್ತದೆ. ಹಲವೊಂದು ಸಲ, ಒಂದು ಸಾಮಾನ್ಯ ಸಂಗತಿಯನ್ನು ಬಲು ಕ್ಲಿಷ್ಟ ಹಾಗು ಅಸ್ಪಷ್ಟ ರೀತಿಯಲ್ಲಿ ಹೇಳಿದ್ದರಿಂದ ವಾಚಕರಿಗೆ ಅದರ ಅರ್ಥಗ್ರಹಣವಾಗದೇ ಹೋದುದೂ ಉಂಟು. ಈ ಕಾರಣಕ್ಕಾಗಿ ಅವನ ಸಮಕಾಲೀನರು ಅವನ ಬರವಣಿಗೆ ಅರ್ಥವಿಲ್ಲದ್ದೆಂದು ಸಾರುವಷ್ಟು ಕಟು ಟೀಕೆಯನ್ನು ಅವನು ಎದುರಿಸಬೇಕಾಯಿತು. ಈ ಮಾತು ಸಂಪೂರ್ಣ ಸುಳ್ಳೂ ಅಲ್ಲ. ಅವನ ಆರಂಭಿಕ ರಚನೆಗಳನ್ನು ಅರ್ಥ ಮಾಡಿಕೊಳ್ಳುವುದೀಗಲೂ ಕಷ್ಟವೇ. ಒಮ್ಮೊಮ್ಮೆ 'ಬೆಟ್ಟ ಅಗೆದು ಇಲಿ ತೆಗೆದ'ರೆಂಬ ಗಾದೆ ಮಾತು ನೆನಪಾಗುತ್ತದೆ, ಅಷ್ಟೆ!

ಸುದೈವದ ಸಂಗತಿಯೆಂದರೆ, ಈ ವಿರೋಧದಿಂದ ಈ ಯುವಕವಿಯ ಕ್ರಿಯಾಚೈತನ್ಯ ಕುಗ್ಗಲಿಲ್ಲ; ಕುಂದಲಿಲ್ಲ. ಆತ ಎದೆಗುಂದದೆ ಹಾಗು ಎಡೆಬಿಡದೆ ತನ್ನದೇ

ಆದ ಉಚ್ಛ್ರಿತ ಶೈಲಿಯಲ್ಲಿ ಬರೆಯುವುದನ್ನು ಮುಂದುವರಿಸಿದ. ಅವನನ್ನು ವಿರೋಧಿಸಿ ಟೀಕಿಸುವವರಿದ್ದಂತೆ ಅವನ ಸ್ವೋಪಜ್ಞ ಹಾಗು ಪ್ರಯೋಗಶೀಲತೆಗಾಗಿ ಮೆಚ್ಚಿ ಕೊಂಡಾಡುವವರೂ ಇದ್ದೇ ಇದ್ದರು. ಅಂಥವರಲ್ಲಿ ನವಾಬ್ ಹುಸಾಮ್ ಉದ್ದೌಲಾ ಒಬ್ಬರು. ಅವರು ಸ್ವಯಂ ಕವಿ; ಸಂಪನ್ನ ಜೀವಿ. ಅವರೊಮ್ಮೆ ಲಖನೌಗೆ ಹೊರಟಾಗ ತಮ್ಮ ಗುರು ಮಹಾಕವಿ ಮೀರ್ ಅವರಿಗೆ ತೋರಿಸುವ ಉದ್ದೇಶದಿಂದ ಗಾಲಿಬನ ಕೆಲವು ಉರ್ದು ಗಝಲ್‌ಗಳನ್ನು ಸಂಗಡ ತೆಗೆದುಕೊಂಡು ಹೋದರು. ಆಗ ಮೀರ್ ತುಂಬಾ ಮುಪ್ಪಿನವರಾಗಿ ಮನೆಯ ಹೊರಗೆಲ್ಲಿಯೂ ಹೋಗಲಾಗದ ಸ್ಥಿತಿಯೊಳಗಿದ್ದರು. ಗಾಲಿಬನ ಗಝಲ್‌ಗಳ ಮೇಲೆ ಕಣ್ಣಾಡಿಸಿ ಚುರುಕಾಗಿ "ಈ ಹುಡುಗನಿಗೆ ಮಾರ್ಗದರ್ಶನ ಮಾಡಬಲ್ಲ ಸಮರ್ಥ 'ಉಸ್ತಾದ್' (ಗುರು) ಸಿಕ್ಕರೆ ಈತನೊಬ್ಬ ದೊಡ್ಡ ಕವಿಯಾಗುತ್ತಾನೆ, ಇಲ್ಲವಾದರೆ ಇಂಥವೇ ನಿರರ್ಥಕ ಪದ್ಯಗಳನ್ನು ಬರೆಯುತ್ತಾ ಹೋಗುತ್ತಾನೆ" ಎಂದು ಅವರು ಉದ್ಗಾರ ತೆಗೆದರು.

ವಾಸ್ತವವಾಗಿ ಗಾಲಿಬನಿಗೆ 'ಉಸ್ತಾದ್' ಎಂಬುವರೇ ಇರಲಿಲ್ಲ. ಅವನ ನಂಬಿಗೆಯ ನೇಹಿಗರು ಆಗೀಗ ಎಚ್ಚರಿಕೆ ನೀಡುತ್ತಿದ್ದರೂ, ತನ್ನ ಅರಿವೇ ತನಗೆ ಗುರುವಾಗಿ ಮಾರ್ಗದರ್ಶನ ಮಾಡೀತೆಂಬ ಭರವಸೆ ಅವನದಾಗಿತ್ತು. ಅವನೊಬ್ಬ ಅತಿವೇಗದ ಬರೆಹಗಾರನಾಗಿದ್ದ. ಮೀರ್ ಅವರ ಹೇಳಿಕೆಯೇ ಅವನು ಅದೆಷ್ಟು ಎಳೆವರೆಯದಲ್ಲಿ ಸಫಲತೆಯ ಕ್ಷಿತಿಜದತ್ತ ಕೈಚಾಚಿದ್ದನೆಂಬ ಸಂಗತಿಯನ್ನು ಸಿದ್ಧಪಡಿಸಬಲ್ಲುದಾಗಿದೆ. ನಮಗೆ ತಿಳಿದಿರುವ ಪ್ರಕಾರ, ಮೀರ್ ಮರಣ ಹೊಂದಿದ್ದು 1810ರ ಸಪ್ಟೆಂಬರ್ 20 ರಂದು. ಆಗ ಗಾಲೀಬನಿಗೆ 13 ವರ್ಷಗಳೂ ತುಂಬಿರಲಿಲ್ಲ. ಅವನು 10-11 ವರ್ಷದವನಿದ್ದಾಗಲೇ ಕಾವ್ಯರಚನೆ ಮಾಡಲಾರಂಭಿಸಿದ್ದ. ಅರ್ಥಾತ್, ಅವನ ಗಝಲ್‌ಗಳು ಮೀರ್ ಅವರ ದೃಷ್ಟಿಗೆ ಬಿದ್ದಾಗ ಅವನು ಬರೆಯಲಾರಂಭಿಸಿ ಕೇವಲ 2-3 ವರ್ಷಗಳಾಗಿರಬೇಕು, ಅಷ್ಟೆ. ಉರ್ದು ಸಾಹಿತ್ಯದ - ಅದರಲ್ಲೂ ಮುಖ್ಯವಾಗಿ ಉರ್ದು ಕಾವ್ಯದ ಚರಿತ್ರೆಯಲ್ಲಿ ಮೀರ್ ಅವರ ಸ್ಥಾನ ಅದ್ವಿತೀಯ. ಗಝಲ್ ರಚನೆಯೊಳಗಂತೂ ಮೀರ್‌ರನ್ನು ಮೀರಿಸಿದವರೇ ಇಲ್ಲವೆಂಬ ಸಂಗತಿಯೂ ಸರ್ವವಿಧಿತ. ಅವರ ನಂತರದ ಪ್ರಮುಖ ಕವಿಗಳೆಲ್ಲರ ದೃಷ್ಟಿಯಲ್ಲಿಯೂ ಅವರೊಬ್ಬ ಸರ್ವಶ್ರೇಷ್ಠ ಕವಿಯೆಂಬ ಮನ್ನಣೆ ಪಡೆದವರು. ಅವರು ತಮ್ಮ ಸಮಕಾಲೀನ ಕವಿಗಳ ಕುರಿತೊಂದು ಬಗೆಯ ತಾತ್ಸಾರಭಾವ ತಳೆದವರಾಗಿದ್ದರು. ದ್ವಿತೀಯ ದರ್ಜೆಯ ಕವಿಗಾಗಲೀ, ಅವನ ಕಾವ್ಯಕ್ಕಾಗಲೀ ಅವರು ಎಳ್ಳಷ್ಟೂ ಗಮನವೀಯುತ್ತಿರಲಿಲ್ಲ. ನವಾಬ್ ಹುಸಾಮ್ ಉದ್ದೌಲಾ ಸ್ವತಃ ಮೀರ್ ಅವರ ಶಿಷ್ಯರೇ ಆಗಿದ್ದರಿಂದ ಅವರ ಗುರುವಿನ ಸ್ವಭಾವ ಅವರಿಗೆ ಚೆನ್ನಾಗಿಯೇ ತಿಳಿದ ವಿಷಯ. ಇಷ್ಟೆಲ್ಲಾ ತಿಳಿದಿದ್ದರೂ ಅವರು ಗಾಲಿಬನ ಗಝಲ್‌ಗಳನ್ನು ಮೀರ್ ಅವರ ಬಳಿಗೊಯ್ಯುವ ಮನಸ್ಸು ಮಾಡಿದ್ದೇ ಅವರು ಸ್ವತಃ ಗಾಲಿಬನ ಪ್ರಶಂಸಕರಾಗಿದ್ದುದಲ್ಲದೆ, ಮೀರ್ ಅವರಿಂದ ಬರಬಹುದಾದ ಪ್ರತಿಕ್ರಿಯೆಯ ಬಗೆಗೂ ಖಾತರಿಯುಳ್ಳವರಾಗಿದ್ದರೆಂಬುದನ್ನು ಖಚಿತಪಡಿಸುತ್ತದೆ. ಮೀರ್ ಅವರ ಉದ್ಗಾರವಂತೂ ಅವರ ಸ್ವಭಾವಕ್ಕನುಗುಣವಾದದ್ದೇ. ಅವರು ಗೈದ ಗಾಲಿಬನ ಸೂಕ್ತ ಮೌಲ್ಯ ಮಾಪನವು ಆ ಮಹಾಪ್ರತಿಭೆಯ ಸೂಕ್ಷ್ಮಗ್ರಾಹೀ ವಿಮರ್ಶಕ ವೃತ್ತಿಯ

ಸಂಕೇತವೇ ಹೌದು.

ಉರ್ದು ಕಾವ್ಯರಂಗದಲ್ಲಿ ಗುರು - ಶಿಷ್ಯ (ಉಸ್ತಾದ್-ಶಾಗಿರ್ದ್) ಪರಂಪರೆ ಪದಾರ್ಪಣ ಮಾಡಿದ್ದು ಇರಾನ್‌ನಿಂದ. ಯಾವನೊಬ್ಬ ಉದಯೋನ್ಮುಖಿ ಕವಿ ಬರೆಯಲಾರಂಭಿಸಿದನೆಂದರೆ, ಅವನು ಮಾರ್ಗದರ್ಶನ ಪಡೆಯಲು ಹಿರಿಯ ಕವಿಯೊಬ್ಬರ ಬಳಿ ಹೋಗುತ್ತಿದ್ದ. ಅವನು ಬರೆದುದೆಲ್ಲವನ್ನೂ ತನ್ನ ಗುರುವಿಗೆ ತೋರಿಸುತ್ತಿದ್ದ. ಆ ಹಿರಿಯರು ಅವನ ಕಾವ್ಯವನ್ನು ತಿದ್ದಿ ಕೊಡುವುದರ ಜತೆಗೆ ಅವನಿಗೆ ಭಾಷೆಯ ಸೂಕ್ಷ್ಮಾಂಶಗಳನ್ನೂ ಕಾವ್ಯ ರಚನಾ ಕೌಶಲ್ಯವನ್ನೂ ತಿಳಿಸಿ ಹೇಳುತ್ತಿದ್ದರು. ಈ ಪರಂಪರೆಯ ಬೇರುಗಳು ಅದೆಷ್ಟು ಆಳಕ್ಕಿಳಿದಿದ್ದವೆಂದರೆ, ಯಾವೊಬ್ಬ ಯುವಕ ಕವಿ ತನಗೆ ಗುರುವಿನ ಅಗತ್ಯವಿಲ್ಲವೆಂದು ಭಾವಿಸುವುದೂ ಸಾಧ್ಯವಿರಲಿಲ್ಲ. ಅನೇಕ ವೇಳೆ, ಶಿಷ್ಯ ಬರೆದುದನ್ನು ಗುರುವಿನ ಜೀವಿತಕಾಲದುದ್ದಕ್ಕೂ ಅವರಿಗೆ ತೋರಿಸುತ್ತಲೇ ಇರುವ ವಾಡಿಕೆಯಿತ್ತು. ಗಾಲಿಬನಿಗೆ ಮಾತ್ರ ಈ ಪರಂಪರೆಯ ಪರಿಧಿಯಲ್ಲಿ ಕೂಡುವ ಗುರುವೇ ಇರಲಿಲ್ಲ. ತನ್ನ ಆರಂಭಿಕ ದಿನಗಳಲ್ಲಿ ಆತ ಯಾರದಾದರೂ ಸಲಹೆ ಪಡೆದಿದ್ದನೋ, ಇಲ್ಲವೋ, ನಮಗೆ ತಿಳಿದಿಲ್ಲ. ಅವನು ಬೆಳೆದು ದೊಡ್ಡವನಾದ ಬಳಿಕ, ಕಾವ್ಯಕಲೆಯೆಂದರೆ ತನಗೆ ದೈವದತ್ತವಾಗಿ ಬಂದ ಕಾಣಿಕೆಯೆಂದು ಹೇಳಿಕೊಳ್ಳುತ್ತಿದ್ದನೆಂಬುದು ನಮಗೆ ತಿಳಿದಿರುವ ವಿಷಯವೇ. ಅಂತೂ ಮೀರ್ ನುಡಿದ ಕಣಿ ಸ್ವಲ್ಪ ಮಟ್ಟಿಗೆ ಸತ್ಯವಾಗಿ ಪರಿಣಮಿಸಿತು. ಗಾಲಿಬನ ಪಾಲಿಗೆ ಸ್ವಂತ ವಿವೇಕದ ಹೊರತಾಗಿ ಬೇರೊಬ್ಬ ಗುರು ಇರಲೇ ಇಲ್ಲ. ಆದರೂ ಆತ ದೊಡ್ಡ ಕವಿಯೆನಿಸಿದ.

ಆತ ಆಗ್ರಾದಿಂದ ದೆಹಲಿಗೆ ಆಗಮಿಸಿದ ಕೂಡಲೇ, ಬಹುಶಃ ತನ್ನ ಮಡದಿಯ ಮನೆಯಲ್ಲೇ ವಾಸಿಸಿರಬಹುದು. ಅವನು ಬರೆದ ಪರ್ಶಿಯನ್ ಪತ್ರವೊಂದರ ಪ್ರಕಾರ, ಮುಂದೆ ಅವನೊಂದು ಸ್ವಂತ ಮನೆ ಖರೀದಿ ಮಾಡಿ ಅಲ್ಲಿಗೆ ಹೋಗಿ ನಿಂತನೆಂದು ತಿಳಿಯುತ್ತದೆ. ಅವನು ತನ್ನ ಮಾವನಾದ ಇಲಾಹಿ ಬಕ್ಷ್ ಖಾನ್‌ನ ಮನೆಯಲ್ಲಿ ಎಷ್ಟು ಕಾಲ ವಾಸವಾಗಿದ್ದನೆಂಬುದೂ ತಿಳಿದಿಲ್ಲ. ಅಲ್ಲಿದ್ದುದು ಮಾತ್ರ ಅವನ ದೃಷ್ಟಿಯಿಂದ ಬಲು ಪ್ರಯೋಜನಕಾರಿಯಾಗಿತ್ತೆಂಬುದು ನಿಜ.

ಆಗಿನ ಕಾಲದ ಸಿರಿವಂತರ ಹಾಗು ಸುಶಿಕ್ಷಿತರ ಮನೆಗಳೆಂದರೆ ಯುರೋಪಿನಲ್ಲಿಯ ರಾಜಮಾನ್ಯ ನಾಗರಿಕರ ವಿಶಾಲವಾದ 'ಸಲೂನ್' ಗಳಂತಿದ್ದು ಅಲ್ಲಿ ವಿದ್ವಾಂಸರು - ಕವಿ - ಕಲಾವಿದರೆಲ್ಲ ಬಂದು ಸೇರುತ್ತಿದ್ದರು. ಮನೆಯ ಮಾಲಿಕ ಈ ಅತಿಥಿಗಳ ಕ್ರಿಯಾಸಕ್ತಿಗಳ ವಿಕಾಸಕ್ಕೆ ನೆರವಾಗುತ್ತಿದ್ದ; ಉತ್ತೇಜನ ನೀಡುತ್ತಿದ್ದ. ಗಾಲಿಬ್ ತನ್ನ ಎಳೆಯ ವಯಸ್ಸಿನಲ್ಲೇ ದೆಹಲಿಯ ಇಂಥ ಪ್ರಭಾವಶಾಲೀ ಪರಿವಾರದೊಡನೆ ಸಂಬಂಧ ಬೆಳಸಿ ಅವರಲ್ಲಿಯೇ ವಾಸವಾಗಿದ್ದರಿಂದ ದೆಹಲಿಯ ಸುಶಿಕ್ಷಿತ ವರ್ಗದ ಪರಿಚಯ ಬೆಳೆಯಲು ಅನುಕೂಲವೇ ಆಯಿತೆನ್ನಬೇಕು. ಈ ಸ್ನೇಹ-ಸಂಪರ್ಕಗಳು ಮುಂದೆ ಅವನಿಗೆ ಬಹಳ ಸಹಾಯಕಾರಿಯೆನಿಸಿದವು. ಅವನಿಗಿಲ್ಲಿ ವಿದ್ವಾಂಸರು ಮತ್ತು ಕವಿಗಳ, ಮುತ್ಸದ್ದಿ-ದೈವಜ್ಞರ, ಸಂತ-ರಾಜಕಾರಣಿಗಳ ನಿಕಟ ಸಂಪರ್ಕವುಂಟಾಯಿತು. ಅವರೆಲ್ಲ ಮುಂದೆ ಅವನ ಕಷ್ಟ-ನಷ್ಟಗಳ ಕಾಲದಲ್ಲಿ ಒದಗಿ ಬಂದು ನೆರವಾದರು.

## ವರ್ಷಾಶನ ವಿವಾದ

ಅವನೀಗ ಸಂಸಾರದ ಭಾರ ಹೊತ್ತ ಯುವಕ. ಅವನು ಆಗ್ರಾದಲ್ಲಿ ವಾಸವಾಗಿರುವವರೆಗೂ ಅವನ ತಾಯಿಯೇ ಅವನೆಲ್ಲ ಭಾರವನ್ನೂ ತೂಗಿಸಿಕೊಂಡು ಹೋಗುತ್ತಿದ್ದಳು. ಆತ ದೆಹಲಿಗೆ ಬಂದ ನಂತರವೂ ಅವಳ ನೆರವು ಮುಂದುವರಿದಿರಬಹುದೆಂದು ತೋರುತ್ತದೆ. ನವಾಬ್ ಅಹಮ್ಮದ್ ಬಕ್ಷ್ ಖಾನ್‌ನ ಸಹಾಯ ಹಸ್ತವೂ ಅಗತ್ಯವೆನಿಸಿದಾಗಲೆಲ್ಲ ದೊರೆಯುತ್ತಲೇ ಇತ್ತು. ಆದರೆ ಇದೆಲ್ಲ ಆಗೊಮ್ಮೆ - ಈಗೊಮ್ಮೆ ದೊರೆಯುವ ನೆರವಾಗಿತ್ತು. ಅವನ ನಿಯಮಿತ ಆದಾಯವೆಂದರೆ, ಅವನ ಕಕ್ಕ ನಸ್ರುಲ್ಲಾ ಬೇಗ್ ಖಾನ್ ತೀರಿಕೊಂಡ ನಂತರ ಬ್ರಿಟಿಷರು ಮಂಜೂರು ಮಾಡಿದ ಐದು ಸಾವಿರ ರೂ.ಗಳ ವರ್ಷಾಶನದಲ್ಲಿ ಇವನ ಪಾಲಿಗೆ ಬರಬೇಕಿದ್ದ ಏಳೂವರೆ ನೂರು ರೂಪಾಯಿ ಮಾತ್ರ. ಅಂತೂ ಬಲು ಶೀಘ್ರವೇ ವಾತಾವರಣ ಬಿಗಡಾಯಿಸಿತು. ಕಷ್ಟದ ದಿನಗಳು ಕಾಲಿಟ್ಟವು.

ನವಾಬ್ ಅಹಮ್ಮದ್ ಬಕ್ಷ್ ಖಾನ್‌ನಿಗೆ ಮೂವರು ಗಂಡು ಮಕ್ಕಳಿದ್ದರು. ಹಿರಿಯವನಾದ ಶಮಸುದ್ದೀನ್ ಅಹಮ್ಮದ್ ಖಾನ್ ಪರಿವಾರದ ಇತರ ಸದಸ್ಯರೊಡನೆ ಹೊಂದಿಕೊಳ್ಳದ ಬಂಡುಗಾರನೆನಿಸಿದ; ಜಗಳವಾಡಿದ; ಪರಿವಾರದವರನ್ನೆಲ್ಲ ಕೆಂಗಣ್ಣಿನಿಂದ ನೋಡಲಾರಂಭಿಸಿದ. ಆದರೆ ಆತನೇ ಅಹಮ್ಮದ್ ಬಕ್ಷ್ ಖಾನ್‌ನ ನಂತರದ ನಿಯಮಬದ್ಧ ವಾರಸುದಾರನಾಗುವವ. ಮುಂದೆ ಅವನ ಕೈಯಲ್ಲೇ ಅಧಿಕಾರವಿರುವುದರಿಂದ ಅವನು ತನ್ನ ತಮ್ಮಂದಿರನ್ನು ಸರಿಯಾಗಿ ನೋಡಿಕೊಳ್ಳಲಿಕ್ಕಿಲ್ಲವೆಂಬ ಅನುಮಾನ ಅಹಮ್ಮದ್ ಬಕ್ಷ್ ಖಾನ್‌ನಿಗೆ ಮೊದಲೇ ಇತ್ತು. ಅಂತೆಯೇ ಆತ ಮುಂದಿನ ಇಂಥ ಪೇಚಿನ ಪ್ರಸಂಗವನ್ನೂ ಹಾಗು ಬ್ರಿಟಿಷರ ಹಾಗು ತನ್ನ ಪರಿವಾರದ ನಡುವೆ ನಡೆಯಬಹುದಾದ ತಿಕ್ಕಾಟವನ್ನೂ ತಪ್ಪಿಸುವ ಮುಂದಾಲೋಚನೆಯಿಂದ 1826ರಲ್ಲಿ ತನ್ನ ಅಧಿಕಾರವನ್ನು ತ್ಯಜಿಸಿ, ಲೋಹಾರೂ ಸಂಸ್ಥಾನದ ಸಮಸ್ತ ಆದಾಯವನ್ನೂ ತನ್ನಿಬ್ಬರು ತಮ್ಮಂದಿರಿಗೆ ಕೊಡುವ ಕರಾರು ಹಾಕಿ ಶಮಸುದ್ದೀನ್ ಅಹಮ್ಮದ್ ಖಾನ್‌ನಿಗೆ ಫಿರೋಜಪುರ ಝಿರಕಾ ಮತ್ತು ಲೋಹಾರೂ ಸಂಸ್ಥಾನಗಳ ಆಡಳಿತಾಧಿಕಾರವನ್ನು ವಹಿಸಿ ಕೊಟ್ಟನು. ಈ ವ್ಯವಸ್ಥೆ ಗಾಲಿಬನ ಮೇಲೆ ನಿರ್ಣಾಯಕ ಪರಿಣಾಮವನ್ನುಂಟು ಮಾಡಿತು. 1806ರ ವ್ಯವಸ್ಥೆಯ ಪ್ರಕಾರ, ಫಿರೋಜಪುರ ಝಿರಕಾ ಮತ್ತು ಲೋಹಾರೂ ಸಂಸ್ಥಾನಗಳ ಆದಾಯದಿಂದ ಅವನಿಗೂ, ಅವನ ಪರಿವಾರಕ್ಕೂ ಸೇರಿ ಐದು ಸಾವಿರ ರೂ.ಗಳ ವರ್ಷಾಶನ ಬರುತ್ತಿತ್ತು. ಇನ್ನು ಮುಂದೆ ಶಮಸುದ್ದೀನ್ ಅಹಮ್ಮದ್ ಖಾನ್ ಈ ವರ್ಷಾಶನ ನೀಡುವ ಅಧಿಕಾರಿಯಾದ. ಶಮಸುದ್ದೀನ್ ಅಹಮ್ಮದ್ ಖಾನ್‌ನಿಗೂ ಅವನ ಇಬ್ಬರು ತಮ್ಮಂದಿರಿಗೂ ಆಗುತ್ತಿರಲಿಲ್ಲ. ಗಾಲಿಬ್ ಆ ಇಬ್ಬರೂ ತಮ್ಮಂದಿರೊಡನೆ ಮೊದಲಿನಿಂದಲೂ ಸಲಿಗೆಯಿಂದಿದ್ದ; ಅವರ ಹಿತೈಷಿಯಾಗಿದ್ದ. ತತ್ಪರಿಣಾಮವಾಗಿ ಶಮಸುದ್ದೀನ್ ಅಹಮ್ಮದ್ ಖಾನ್‌ನ ಕೆಂಗಣ್ಣು ಗಾಲಿಬನ ಕಡೆಗೂ ತಿರುಗಿತು. ಗಾಲಿಬನಿಗೆ ಸಿಗಬೇಕಾದ ವರ್ಷಾಶನ ಸಮಯಕ್ಕೆ ಸರಿಯಾಗಿ ಸಿಗದಂತಾಯಿತು; ಕೊನೆಗೆ ನಿಂತೂ ಹೋಯಿತು.

## ಪ್ರೇಮ ಪ್ರಕರಣ

ಸುಮಾರು ಇದೇ ಕಾಲಕ್ಕೆ ಗಾಲಿಬನ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರಿದಂಥ ಭಾವನಾತ್ಮಕ ಸಂಬಂಧದ ಪ್ರಕರಣವೊಂದು ನಡೆಯಿತು. ಬಹಳವಾದರೆ ಆತನಿಗೆ ಆಗ 25ರ ವಯಸ್ಸು. ತುಂಬು ಪ್ರಾಯದ ಯುವಕ ಗಾಲಿಬ್ ಬಲು ದಷ್ಟಪುಷ್ಟನಾಗಿದ್ದ. ಕಣ್ಣಿಗೂ ಚೆಲುವ ಚೆನ್ನಿಗನಾಗಿದ್ದ, ಸ್ಥಿತಿವಂತನೂ ಆಗಿದ್ದ. ಅವನ ನಿತ್ಯಸಂಪರ್ಕದಲ್ಲಿದ್ದ ಸಮಾಜದ ದೃಷ್ಟಿಯಲ್ಲಿ ಯಾರೊಬ್ಬರು ಉಪಪತ್ನಿಯನ್ನಿಡುವುದು ಆಕ್ಷೇಪಾರ್ಹವೇನೂ ಆಗಿರಲಿಲ್ಲ. ಹಾಗೆ ನೋಡಿದರೆ, ಅದೊಂದು ಪ್ರತಿಷ್ಠೆಯ ಪ್ರತೀಕವೆಂದೇ ಭಾವಿಸಲಾಗುತ್ತಿತ್ತು. ಆಗಿನ ಎಲ್ಲ ವರ್ಗಗಳ-ಅಂದರೆ ವಿದ್ವಾಂಸರು, ಮುತ್ಸದ್ದಿಗಳು, ದೈವಜ್ಞರು, ಸರದಾರರು - ಮುಂತಾದವರ ಮನೆಮನೆಗಳಲ್ಲೂ ಖಾಯಂ ಸಂಬಂಧವಿರಿಸಿಕೊಳ್ಳುವ ನರ್ತಕಿಯರೂ, ಉಪಪತ್ನಿಯರೂ ಇರುತ್ತಿದ್ದರೆಂದು ತಿಳಿಯುತ್ತದೆ. ಅವನತಿಯ ಇಳಿಜಾರಿನಲ್ಲಿ ನಡೆಯುವ ಸಮಾಜದಲ್ಲಿರುವ ನಾಗರಿಕರ ನೈತಿಕ ಮಟ್ಟವೂ ಇಳಿಮುಖಗೊಳ್ಳುತ್ತದೆ; ಅವರಿಗೆ ತಾವು ನಡೆದದ್ದೇ ದಾರಿಯೆಂಬ ಭ್ರಮೆಯುಂಟಾಗುತ್ತದೆ. 18ನೆಯ ಶತಮಾನದ ಆರಂಭಕಾಲದಿಂದ ದೆಹಲಿಯ ಕೇಂದ್ರ ಸರಕಾರದ ರಾಜಕೀಯ ಬಲ ಕ್ರಮೇಣ ಕುಗ್ಗುತ್ತ ನಡೆದಿತ್ತು. ಕೊನೆಕೊನೆಯ ಮೊಗಲರಸರಿಗೆ ದೊರೆತ ಅಲ್ಪಸ್ವಲ್ಪ ಮಾನಮರ್ಯಾದೆಗಳು ಅವರ ವಂಶದವರ ಖ್ಯಾತಿಯಿಂದಾಗಿ ಪ್ರಾಪ್ತವಾದುವೇ ಹೊರತಾಗಿ ಅವರ ಸ್ವಂತ ಹೆಗ್ಗಳಿಕೆಯಿಂದಲ್ಲ. ಔರಂಗಜೇಬನ ಕಾಲದವರೆಗೂ ಪಟ್ಟಕ್ಕೆ ಬಂದ ಒಬ್ಬೊಬ್ಬ ಅರಸರೂ ಒಳ್ಳೆಯ ಮೇಧಾವಿಗಳಾಗಿದ್ದರು, ಸಮರ್ಥ ಆಡಳಿತಗಾರರಾಗಿದ್ದರು, ಕುಶಾಗ್ರಮತಿಗಳೂ ಕ್ರಿಯಾಶೀಲರೂ ಆಗಿದ್ದರು. ಒಬ್ಬೊಬ್ಬರೂ ಎಂಥ ಕಠಿಣ ಪ್ರಸಂಗ ಬಂದರೂ ತಕ್ಷಣ ಅದನ್ನೆದುರಿಸುವ ಸಾಮರ್ಥ್ಯವುಳ್ಳವರಾಗಿದ್ದರು. ತತ್ಪರಿಣಾಮವಾಗಿ, ಅವರ ಸಾಮ್ರಾಜ್ಯವು ಭೌಗೋಲಿಕವಾಗಿ ವಿಸ್ತಾರಗೊಂಡದ್ದು ಮಾತ್ರವಲ್ಲದೆ, ಸಾಮ್ರಾಜ್ಯದುದ್ದಕ್ಕೂ ಏಕಸೂತ್ರವಿತ್ತು, ಏಕಭಾವನೆಯಿತ್ತು, ಸುಖದ ಸಂತೃಪ್ತಿಯಿತ್ತು. ಸಾಮ್ರಾಜ್ಯದ ಖಜಾನೆ ತುಂಬಿರುತ್ತಿತ್ತು, ಸೈನ್ಯದಲ್ಲಿ ಶಿಸ್ತಿತ್ತು, ಸಮಾಧಾನವಿತ್ತು. ಔರಂಗಜೇಬನ ಮರಣಾನಂತರ ಈ ಮಹಾಸಾಮ್ರಾಜ್ಯದ ಒಂದೊಂದೇ ಭಾಗಗಳು ಕೇಂದ್ರ ಸರಕಾರದ ಹಿಡಿತದಿಂದ ದೂರ ಸಿಡಿಯಲಾರಂಭಿಸಿದವು. ರಾಜಧಾನಿಯಲ್ಲಿದ್ದ ಹೊಗಳುಭಟ್ಟಂಗಿಗಳೆಲ್ಲ ಪರಸ್ಪರರನ್ನು ತೆಗಳುತ್ತ ಒಳಬೇಟೆಯಾಡುತ್ತ ರಾಜರಿಂದ 'ಪಾಲಿಗೆ ಬಂದಷ್ಟೆ ಪಂಚಾಮೃತ' ಎಂಬ ಸ್ವಾರ್ಥಕ್ಕಿಳಿದರು. ವಿವಿಧ ವರ್ಗಗಳ ನಡುವೆ ನಡೆದ ಈ ಕಚ್ಚಾಟ-ಚುಚ್ಚಾಟಗಳಿಂದಾಗಿ ಸರ್ವತ್ರ ಅರಾಜಕತೆಯ ವಾತಾವರಣ ಹರಡಿಕೊಂಡಿತು. ಯಾರೊಬ್ಬರಿಗೂ ಸಮಯದ ಕೊರತೆಯೂ ಇರಲಿಲ್ಲ; ಇದ್ದ ಸಮಯವನ್ನು ಹೇಗೆ ಸದುಪಯೋಗಪಡಿಸಿಕೊಳ್ಳಬೇಕೆಂಬ ವಿವೇಕವೂ ಉಳಿದಿರಲಿಲ್ಲ. ರಾಜಕಾರಣಿಗಳದ್ದೇ ಮೇಲುಗೈಯಾಯಿತು; ಹಲಕೆಲವರ ವಿರೋಧವನ್ನು ಕಡೆಗಣಿಸಿಯೂ ಧರ್ಮ-ನೀತಿಗಳನ್ನೆಲ್ಲ ಗಾಳಿಗೆ ತೂರಲಾಯಿತು. ಇಂಥ ವಾತಾವರಣದಲ್ಲಿ ಪ್ರತಿಯೊಬ್ಬರೂ ಕುಡಿತ, ಜೂಜಾಟ ಹಾಗು ನರ್ತಕಿಯರ ಸಹವಾಸದಲ್ಲಿ ತಮ್ಮ ಚಿಂತೆಗಳನ್ನೆಲ್ಲ ತೇಲಿಸಿ

ಬಿಡುವಂತಾಯಿತು.

ಗಾಲಿಬನ ಪ್ರೇಯಸಿ ಯಾವ ವರ್ಗಕ್ಕೆ ಸೇರಿದವಳೆಂಬುದು ನಮಗೆ ತಿಳಿದಿಲ್ಲ. ಬದುಕಾಲದ ನಂತರ ಅವನು ಬರೆದ ಪತ್ರವೊಂದರಲ್ಲಿ ಅವನ ಪ್ರೇಮ ಪ್ರಕರಣದ ವಿಷಯ ಬರುತ್ತದೆ. ಅದರಲ್ಲಿ ಆತ ಆಕೆಗೆ 'ಡೊಮನಿ'-ಅಂದರೆ ನರ್ತಕಿ - ಗಾಯಕಿ ಎಂದು ಕರೆದಿದ್ದಾನೆ. ಈ ಅನುಮಾನ ನಿಜವಾದುದಿದ್ದರೆ, ಆಕೆಯಿನ್ನೂ ಯೌವನದಲ್ಲಿರುವಾಗಲೇ ತೀರಿಕೊಂಡಂತೆ ತೋರುತ್ತದೆ. ಪ್ರಾಯಶಃ ಅವಳು ಸತ್ತ ಬಳಿಕ ಬರೆದಿರಬಹುದಾದ, ಗಾಲಿಬ್‌ನ ಚರಮ ಗೀತವೊಂದು ಹೀಗಿದೆ :

ನನ್ನ ವ್ಯಥೆಯ ಕಾರಣ ನಿನಗೆ ನೋವು ಹಾಯ್ ಹಾಯ್
ಯಾಕೆ ಹೀಗೆ, ನಿನ್ನ ತಾಳ ತಪ್ಪಿ ಹೋಯ್ತೊ, ಹಾಯ್ ಹಾಯ್ ॥

ನೋವನಿಂಗಿಸಿಡುವ ಕ್ಷಮತೆ ನಿನ್ನ ಹೃದಯಕಿರದಿರೆ
ನನ್ನ ದುಃಖದಲ್ಲಿ ಭಾಗಿಯೇತಕೆ ನೀನಾದೆ, ಹಾಯ್ ॥

ಏಕೆ ನೀನು ಬಯಸಿ ಬಂದೆ ನನ್ನ ಕೆಳೆತನ
ನನ್ನ ನೇಹದಲ್ಲಿ ನಿನ್ನ ವೈರವುದಿಸಿತಲ್ಲ, ಹಾಯ್ ॥

ಆ ಜೀವನ - ಪ್ರೇಮವಚನ ನೀನು ಕೊಟ್ಟುದೇತಕೆ
ಈ ಜೀವನವನಿತು ಸಣ್ಣದೆನಿಸಿ ಬಿಟ್ಟಿತಲ್ಲ ಹಾಯ್ ॥

ಈ ಬದುಕಿನದೀ ಪರಿಸರ ವಿಷಮಯವೇಕಾಯಿತೋ
ನಿನ್ನ ಪರಿಗು ಪರಿಸರಕೂ ತಾಳೆಹೊಂದಲಿಲ್ಲ ಹಾಯ್ ॥

ಏನಾಯಿತೊ ನಿನ್ನ ರೂಪಸಿರಿಯ ಸುಮನರಾಜಿಗೆ
ನಿನ್ನ ಅಲಂಕಾರವೆಲ್ಲ ಧೂಳಿಗಿಳಿಯಿತಲ್ಲ ಹಾಯ್ ॥

ಅಪವಾದದ ಅಳುಕಿನಿಂದ ಮಣ್ಣಿನ ಮುಖವಾಡ ಹೊದ್ದು
ನಿನ್ನ ಮಮತೆಯನ್ನ ಮರೆಗೆಸರಿಸಿ ಬಿಟ್ಟೆಯಲ್ಲ ಹಾಯ್ ॥

ಧೂಳಿಯಡಿಗೆ ಸೇರಿ ಹೋಯ್ತು ನೀನು ಒಲಿದು ಕೊಟ್ಟ ಮಾತು
ಜಗದೊಳಿನ್ನು ಯಾರನಾರು ಒಲಿದು ನಂಬಲುಂಟು ಹಾಯ್ ॥

ಖಡ್ಗ ಹಿಡಿದು ಪರಕಿಸುವನ ಕೈಯ ಸ್ತೋತು ಹೋಯಿತೇ
ಹೃದಯಕೊಂದು ಆಳವಾದ ಗಾಯಗೈಯಲಿಲ್ಲ ಹಾಯ್ ॥

ಕಳೆವುದೆಂತು ಮಳೆಗಾಲದ ಕಾಳ ರಾತ್ರಿಗಳನು?
ತಾರೆಗಳನ್ನೆಣಿಸಿ ನಲಿವ ಕಂಗಳ ಗತಿಯೇನು ಹಾಯ್ ॥

ಒಲವಿನೊಸಗೆ ಕಿವಿಗಿಲ್ಲದೆ ರೂಪಸಿರಿಯ ಕಣ್ಣಿಗಿರದೆ
ಹೃದಯವೆಂತು ಸಹಿಸಬೇಕು ಈ ನಿರಾಸೆ ಹಾಯ್ ಹಾಯ್ ॥

ಒಲವು ಗೀಳಿನಾಳಕಿಳಿವ ಮುನ್ನವೆ ಓ ಗಾಲಿಬ್
ಸ್ವಪ್ನ ಪೂರ್ಣ ಪಲ್ಲವಿಸದೆ ಕಮರಿ ಹೋಯ್ತು ಹಾಯ್ ಹಾಯ್ ॥

ಆಕೆ ಬಹುಶ: ಮಾನವಂತ ಮನೆತನದವಳಾಗಿರಬೇಕೆಂದೂ, ತಮ್ಮಿಬ್ಬರ ಪ್ರಣಯ ತನ್ನ ಆಪ್ತೇಷ್ಟರ ಹಾಗು ಸಮಾಜದ ದೃಷ್ಟಿಯಲ್ಲಿ ಪಾಪಕೃತ್ಯವೆನಿಸುವ ಭಯದಿಂದ ಆತ್ಮಹತ್ಯೆ ಮಾಡಿಕೊಂಡಿರಬೇಕೆಂದೂ ಈ ಪದ್ಯದಿಂದ ಭಾಸವಾಗುತ್ತದೆ. ಅವಳೊಬ್ಬ ಬೀದಿಯ ಬಸವಿ ಅಥವಾ ಸಾಮಾನ್ಯದರ್ಜೆಯ ಮಹಿಳೆಯಾಗಿದ್ದರೆ ಪಾಪಕೃತ್ಯದ ಅಥವಾ ಸಾಮಾಜಿಕ ಆರೋಪದ ಪ್ರಶ್ನೆ ಏಳುತ್ತಿರಲಿಲ್ಲ. ಅವಳು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಮೇಯವೂ ಬರುತ್ತಿರಲಿಲ್ಲ. ಈ ಪ್ರೇಮ ಪ್ರಕರಣ ಗಾಲಿಬನ ಯುವಹೃದಯದ ಮೇಲೆ ಅಚ್ಚಳಿಯದ ಪರಿಣಾಮವನ್ನುಂಟು ಮಾಡಿತು. ಅಂದಿನ ಸಾಮಾಜಿಕ ವಾತಾವರಣದಲ್ಲಿ ಆತ ಇನ್ನಿತರ ಭಾವನಾತ್ಮಕ ಸ್ನೇಹ-ಸಂದರ್ಶಗಳಲ್ಲಿ ಬಂದಿರಲೂ ಬಹುದು. ಆದರೆ ಆ ಬಗೆಗಿನ ಯಾವ ವಿವರಗಳೂ ದೊರೆತಿಲ್ಲ.

ಇಂಥ ಸಾಮಾಜಿಕ ವಾತಾವರಣದಲ್ಲಿ ಜೀವಿಸಿದ್ದ ಗಾಲಿಬ್ ತನ್ನ ಪರಿಸರದ ಪ್ರಭಾವದಿಂದ ಮುಕ್ತನಾಗಿರುವುದು ಸಾಧ್ಯವಿರಲಿಲ್ಲ. ಅವನು ಕುಡಿತವನ್ನಾರಂಭಿಸಿದ; ಜೂಜಾಟಕ್ಕಿಳಿದ. ತತ್‌ಫಲವಾಗಿ ಹೊರ ಹೆಣ್ಣಿನ ಸಂಪರ್ಕದಲ್ಲಿ ಬಂದ. ಈ ಎಲ್ಲ ಷೋಕಿಗಳನ್ನು ಪೂರೈಸಲು ಕೈತುಂಬ ಹಣ ಬೇಕಲ್ಲ. ಆದರೆ ಅವನ ಬಳಿಗೆಲ್ಲಿಂದ ಬರಬೇಕು ಅಷ್ಟೊಂದು ಹಣ? ಅವನ ತಾಯಿ ಆಗ್ರಾದಲ್ಲಿ ಜೀವಂತವಿದ್ದಷ್ಟು ಕಾಲ ಅವನಿಗೆ ಹಣ ಕಳಿಸುತ್ತಿದ್ದಿರಬೇಕು. ಈ ಪರಿವಾರದ ಬಗೆಗಿನ ಅಭಿಮಾನ ಹಾಗು ನೈತಿಕ ಹೊಣೆಯಿಂದಾಗಿ ಅಹಮ್ಮದ್ ಬಕ್ಷ್ ಖಾನ್‌ನೂ ಆಗಾಗ ಅವನಿಗೆ ಸಹಾಯ ಮಾಡುತ್ತಲೇ ಇದ್ದ. ಆದರೆ ನವಾಬನ ಅಧಿಕಾರ-ತ್ಯಾಗದ ನಂತರ ಮಾತ್ರ ಪರಿಸ್ಥಿತಿ ಬಿಗಡಾಯಿಸುತ್ತ ನಡೆಯಿತು. ಗಾಲಿಬನ ಆರ್ಥಿಕ ಸ್ಥಿತಿ ಚಿಂತಾಜನಕವಾಯಿತು. ಅವನು ಮಿತಿಮೀರಿ ಸಾಲ ಮಾಡಲಾರಂಭಿಸಿದ. ಇಂಥ ಸಂದರ್ಭಗಳಲ್ಲೇ ಪ್ರಾಯಶ್ಚಿತ್ತದ ಹೋತಗಳ ಅಗತ್ಯ ಭಾಸವಾಗುವುದು.

## ವರ್ಷಾಶನದ ವ್ಯಾಜ್ಯ

ಈ ಮೊದಲು ಹೇಳಿದಂತೆ, ಗಾಲಿಬನ ಕಕ್ಕ ನಸ್ರುಲ್ಲಾ ಬೇಗ್ ಖಾನ್ ತೀರಿಕೊಂಡಾಗ,

1806ರ ಮೇ ತಿಂಗಳಲ್ಲಿ ಲಾರ್ಡ್ ಲೇಕ್ ಅವನ ಪರಿವಾರಕ್ಕೆ ಹತ್ತು ಸಾವಿರ ರೂಗಳ ವರ್ಷಾಶನ ಮಂಜೂರು ಮಾಡಿದ್ದನಷ್ಟೆ. ಅನತಿ ಕಾಲದಲ್ಲೆ ಆ ರಕಮನ್ನು ಐದು ಸಾವಿರಕ್ಕೆ ಇಳಿಸಲಾಗಿತ್ತಲ್ಲದೆ ಆ ವರ್ಷಾಶನ ಪಡೆಯುವವರಲ್ಲಿ ಖ್ವಾಜಾ ಹಾಜಿ ಎಂಬೊಂದು ಹೊಸ ಹೆಸರನ್ನೂ ಸೇರ್ಪಡೆಗೊಳಿಸಲಾಗಿತ್ತು. ಹೀಗೆ ವರ್ಷಾಶನದ ರಕಮನ್ನು ಅರ್ಧಕ್ಕಿಳಿಸಿ ಹೊರಡಿಸಿದ ಆಜ್ಞೆಯ ವಿಷಯ ಗಾಲಿಬನ ಗಮನಕ್ಕೆ ಬಂದೇ ಇರಲಿಲ್ಲ. ವರ್ಷಾಶನದ ಒಟ್ಟು ರಕಮು ಹತ್ತು ಸಾವಿರ ರೂಗಳೆಂದೇ ಅವನ ಭಾವನೆಯಾಗಿತ್ತು. ಅವನ ಆರ್ಥಿಕ ಸ್ಥಿತಿ ಹದಗೆಡುತ್ತ ಹೊರಟಂತೆ ಅವನಿಗೆ ಎಚ್ಚರಿಕೆಯುಂಟಾಯಿತು. ಇಲ್ಲಿಯವರೆಗೆ ತನ್ನ ಪರಿವಾರಕ್ಕೆ ಹತ್ತು ಸಾವಿರದ ಬದಲಾಗಿ ಕೇವಲ ಐದೇ ಸಾವಿರ ರೂ. ಕೊಡಲಾಗುತ್ತಿದೆಯಲ್ಲ ಎಂದು ಕಳವಳವುಂಟಾಯಿತು. ಅಷ್ಟಲ್ಲದೆ, ಈ ವರ್ಷಾಶನದಲ್ಲಿ ನಸ್ರುಲ್ಲಾ ಬೇಗ್ ಖಾನ್‌ನ ಪರಿವಾರಕ್ಕೆ ಸಂಬಂಧವೇ ಇಲ್ಲದ ಹೊಸಬನೊಬ್ಬನನ್ನು ಹಕ್ಕುದಾರನನ್ನಾಗಿ ಸೇರಿಸಿದ್ದರು. ಅದು ಆಕ್ಷೇಪಾರ್ಹವಾಗಿತ್ತಷ್ಟೇ ಅಲ್ಲದೆ, ಗಾಯದ ಮೇಲೆ ಮತ್ತೊಂದು ಬರೆಯೆಳೆದಂತೆ ವರ್ಷಾಶನದ ಹಣದಲ್ಲಿ ಆ ಹೊಸಬನಿಗೇ ಹೆಚ್ಚಿನ ಪಾಲು ದೊರೆಯುವಂತೆ ನಿಗದಿಗೊಳಿಸಲಾಗಿತ್ತು. ಇದೆಲ್ಲವನ್ನು ಸರಿಪಿರಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಗಾಲಿಬ್ ಮೊದಲು ನವಾಬ್ ಅಹಮ್ಮದ್ ಬಕ್ಷ್ ಖಾನ್‌ನಿಗೆ ಈ ವಿಷಯವನ್ನು ನಿವೇದಿಸಿಕೊಂಡ. ಅವನಿಗೆ ನ್ಯಾಯ ದೊರಕಿಸಿ ಕೊಡುವುದಾಗಿ ನವಾಬ್ ಸಮಾಧಾನ ಹೇಳಿದರೂ, ಮುಂದೆ ಆ ಬಗ್ಗೆ ಯಾವ ಸಮಾಧಾನಕರ ಕ್ರಮವನ್ನೂ ಕೈಕೊಳ್ಳಲಿಲ್ಲ. ಗಾಲಿಬನಿಗೆ ಬಲು ಬೇಸರವೆನಿಸಿ, ಮೂಲತಃ ಲಾರ್ಡ್ ಲೇಕ್‌ನಿಂದ ಮಂಜೂರಾದ ಈ ವರ್ಷಾಶನದ ವಿಷಯವನ್ನು ಅತ್ಯುಚ್ಚ ಸರಕಾರದಿಂದ ಇತ್ಯರ್ಥಗೊಳಿಸಿಕೊಳ್ಳಲು ಕಲ್ಕತ್ತೆಗೆ ಹೊರಡಬೇಕೆಂದು ನಿರ್ಧರಿಸಿದ.

# ಕಲ್ಕತ್ತೆಗೆ ಪಯಣ

ಗಾಲಿಬ್ ಕಾನಪುರ, ಲಖನೌ, ಬಾಂದಾ, ಅಲಹಾಬಾದ್, ಬನಾರಸ್, ಮುರ್ಶಿದಾಬಾದ್ ಮುಂತಾದ ಪಟ್ಟಣಗಳ ಮೂಲಕ ಸುದೀರ್ಘ ಹಾಗು ಪ್ರಯಾಸಕರ ಪ್ರಯಾಣ ಮಾಡಿ 1828ರ ಫೆಬ್ರವರಿ ತಿಂಗಳಾರಂಭದ ದಿನಗಳಲ್ಲಿ ಕಲ್ಕತ್ತೆಗೆ ಹೋಗಿ ತಲುಪಿದ. ಅದೇ ಎಪ್ರಿಲ್ ತಿಂಗಳ ಕೊನೆಯಲ್ಲಿ 'ಗವ್ಹರ್ನರ್ ಜನರಲ್-ಇನ್-ಕೌನ್ಸಿಲ್'ನಿಗೆ ತನ್ನ ಮೊದಲ ಅರ್ಜಿಯನ್ನು ಸಾದರ ಪಡಿಸಿದ. ಅದರಲ್ಲಿ ಈ ಕೆಳಗಿನಂತೆ ಬಿನ್ನವಿಸಿಕೊಂಡಿದ್ದ:

1. ಲಾರ್ಡ್ ಲೇಕ್ 1806ರ ಮೇ ತಿಂಗಳಲ್ಲಿ ನಸ್ರುಲ್ಲಾ ಬೇಗ್ ಖಾನ್‌ನ ಪರಿವಾರದ ಪೋಷಣೆಗಾಗಿ ಹತ್ತು ಸಾವಿರ ರೂಗಳ ವರ್ಷಾಶನ ಮಂಜೂರು ಮಾಡಿದ್ದುಂಟು. ಅದರ ಬದಲಾಗಿ, ಈವರೆಗೆ ಕೇವಲ ಐದು ಸಾವಿರ ರೂ. ಮಾತ್ರ ಕೊಡಲ್ಪಾಗುತ್ತಿದೆ. ಮೂಲ ಮಂಜೂರಿಯಂತೆ ಹತ್ತು ಸಾವಿರ ರೂ. ಕೊಡುವ ಆಜ್ಞೆಯಾಗಬೇಕು.

2. ಈ ವರ್ಷಾಶನವನ್ನು ನಸ್ರುಲ್ಲಾ ಬೇಗ್ ಖಾನ್‌ನ ಪರಿವಾರಕ್ಕಾಗಿ ಮಂಜೂರು ಮಾಡಲಾಗಿತ್ತು. ಆದರೆ, ನಸ್ರುಲ್ಲಾ ಬೇಗ್ ಖಾನ್ ಅಥವಾ ಅವನ ಪರಿವಾರಕ್ಕೆ ಸಂಬಂಧವನ್ನೇ ಹೊಂದಿರದ ಹೊಸಬನನ್ನೂ (ಖ್ವಾಜಾ ಹಾಜಿ) ಈ ವರ್ಷಾಶನ ಪಡೆಯುವವರಲ್ಲಿ ಸೇರಿಸಲಾಯಿತ್ತಲ್ಲದೆ, ಅವನ ಮರಣದ ನಂತರವೂ, ಅವನಿಬ್ಬರು ಮಕ್ಕಳಿಗೆ ಅವನ ಪಾಲಿನ ಹಣ ನೀಡಲಾಗುತ್ತಿದೆ. ಇದನ್ನು ನಿಲ್ಲಿಸಬೇಕು.

3. ಮೊದಲು ಮಂಜೂರಾದ ಹತ್ತು ಸಾವಿರ ಹಾಗು ಪ್ರತ್ಯಕ್ಷದಲ್ಲಿ ಕೊಡಲಾಗುತ್ತಿರುವ ಐದು ಸಾವಿರ ರೂಗಳ ನಡುವಿನ ಬಾಕಿ ಹಣವನ್ನು ಲೆಕ್ಕ ಮಾಡಿ ಸಂದಾಯಗೊಳಿಸಬೇಕು. ಈವರೆಗೆ ಖ್ವಾಜಾ ಹಾಜಿಗೆ ತಪ್ಪಿ ಕೊಡಲಾಗಿರುವ ಎರಡು ಸಾವಿರ ರೂಗಳ ಲೆಕ್ಕವೂ ಈ ಬಾಕಿ ಹಣದಲ್ಲಿ ಸೇರಬೇಕು.

4. ಇನ್ನು ಮುಂದೆ, ಈ ವರ್ಷಾಶನವನ್ನು ಫಿರೋಜಪುರ ಝಿರಕಾ ಸಂಸ್ಥಾನದಿಂದ ಕೊಡುವ ಬದಲು ಬ್ರಿಟಿಷ್ ಬೊಕ್ಕಸದಿಂದಲೇ ಕೊಡಬೇಕು.

ನವಾಬ್ ಅಹಮ್ಮದ್ ಬಕ್ಷ್ ಖಾನ್ 1827ರ ಅಕ್ಟೋಬರ್ ತಿಂಗಳಲ್ಲಿ ತೀರಿಕೊಂಡ. ಅವನ ಮರಣವಾರ್ತೆ ತಲುಪಿದಾಗ ಗಾಲಿಬ್ ಕಲ್ಕತ್ತೆಯ ಮಾರ್ಗದಲ್ಲಿ - ಮುರ್ಶಿದಾಬಾದ್‌ನಲ್ಲಿದ್ದ. ಇನ್ನು ಈ ವರ್ಷಾಶನದ ಪ್ರಶ್ನೆ ಗಾಲಿಬ್ ಹಾಗು ನವಾಬನ ಜೀವಿತಕಾಲದಲ್ಲೇ ಫಿರೋಜಪುರ ಝಿರಕಾದ ಶಾಸನಸೂತ್ರಧಾರಿಯಾಗಿದ್ದ ಅವನ ಹಿರಿಯ ಮಗ ಶಮಸುದ್ದೀನ್ ಅಹಮ್ಮದ್ ಖಾನ್‌ನ ನಡುವೆಯೇ ಬಗೆಹರಿಯಬೇಕಲ್ಲ. ಶಮಸುದ್ದೀನ್ ಅಹಮ್ಮದ್ ಖಾನ್, ಲಾರ್ಡ್ ಲೇಕ್ ಮಂಜೂರು ಮಾಡಿದ್ದ ಹತ್ತು ಸಾವಿರ ರಕಮನ್ನು ಐದು ಸಾವಿರಕ್ಕಿಳಿಸಿದ ಎರಡನೆಯ ಆಜ್ಞೆಯನ್ನು ಗಾಲಿಬ್‌ನಿಗೆ

ಕಳಿಸಿದ. ತಾನು ಕೇಳುತ್ತಿರುವ ಹತ್ತು ಸಾವಿರ ರೂಗಳ ವರ್ಷಾಶನದ ಬೇಡಿಕೆ ಸರಿಯಾದದ್ದೇ ಎಂಬ ಖಾತರಿಯಿಂದ ಗಾಲಿಬ್ ಆ ಎರಡನೆಯ ಆಜ್ಞೆ ಕಳ್ಳಬರಹದ್ದಾಗಿರಬೇಕು, ಇಲ್ಲವೆ ಅಕ್ರಮ ರೀತಿಯಿಂದ ಪಡೆದುಕೊಂಡದ್ದಾಗಿರಬೇಕು - ಎಂದು ವಾದಿಸಿದ. ಸಾಮಾನ್ಯವಾಗಿ ಮಹತ್ವದ ಕಾಗದ, ಪತ್ರಗಳನ್ನೆಲ್ಲ ಸರಕಾರಿ ಫೈಲುಗಳಲ್ಲಿಡುವುದು ಕ್ರಮ-ಬದ್ಧವಾದರೂ ಈ ಆಜ್ಞೆ ಮಾತ್ರ ಕಲ್ಕತ್ತೆ-ದೆಹಲಿಗಳ ಯಾವ ಸರಕಾರೀ ಫೈಲಿನಲ್ಲಿಲ್ಲ ಎಂಬುದೂ ಗಾಲಿಬನ ವಾದ. ಎರಡನೆಯದಾಗಿ ಈ ಆಜ್ಞೆ ಪರ್ಶಿಯನ್ ಭಾಷೆಯಲ್ಲಿದ್ದು, ಆಗಿನ ರೂಢಿಯಂತೆ, ಅದರ ಹಿಂಭಾಗದ ಮೇಲೆ ಲಾರ್ಡ್ ಲೇಕ್ ಅಥವಾ ಅವನ ಕಾರ್ಯದರ್ಶಿಯದಾದರೂ ಸಹಿಯಿರಬೇಕಾಗಿತ್ತು. ಶಮಸುದ್ದೀನ್ ಅಹಮ್ಮದ್ ಖಾನ್ ಕಳಿಸಿದ ಆಜ್ಞೆಯಲ್ಲಿ ಅವರಾರ ಸಹಿಯೂ ಇರಲಿಲ್ಲ. ಆದ್ದರಿಂದ ಈ ಆಜ್ಞೆ ಅಧಿಕೃತವಲ್ಲವೆಂದೂ ಅದಕ್ಕಾವ ಕಿಮ್ಮತ್ತಿಲ್ಲವೆಂದೂ ಗಾಲಿಬ್ ವಾದಿಸಿದ. ಒಟ್ಟಿನಲ್ಲಿ, ಲಾರ್ಡ್ ಲೇಕ್‌ನ ಸಹಿಯಿಂದ ಮಂಜೂರಾಗಿ, ಗವರ್ನರ್ ಜನರಲ್-ಇನ್-ಕೌನ್ಸಿಲ್‌ನ ಸಮ್ಮತಿಯಿಂದ ಹೊರಬಿದ್ದಿದ್ದು ಕಲ್ಕತ್ತೆಯ ಕಚೇರಿಯಲ್ಲೂ ಕಾದಿಡಲಾಗಿರುವ ಹತ್ತು ಸಾವಿರ ರೂ.ಗಳ ವರ್ಷಾಶನ ಮೂಲ ಆಜ್ಞೆಯನ್ನು ಈ ಎರಡನೆಯ ಆಜ್ಞೆ ರದ್ದು ಪಡಿಸಿದೆಯೆಂದಾಗುವುದೇ ಇಲ್ಲ.

ಗಾಲಿಬನ ತರ್ಕಬದ್ಧ ವಾದ ಸರಿಯಾದದ್ದೆಂದು ಖಾತರಿಗೊಂಡ ಭಾರತ ಸರಕಾರದ ಪ್ರಧಾನ ಕಾರ್ಯದರ್ಶಿ ನವಾಬನಿಂದ ಸಾದರ ಪಡಿಸಲಾದ ಆಜ್ಞೆ ನಕಲಿಯೆಂದೂ, ಗಾಲಿಬನ ಬೇಡಿಕೆಯನ್ನು ಮಂಜೂರು ಮಾಡಬೇಕೆಂದೂ ಶಿಫಾರಸು ಮಾಡಿದ. ಆದರೆ, ಈ ಜಾಗೀರ್ ಹಾಗು ಅನುದಾನಗಳನ್ನು ಕೊಡಮಾಡಿದ ಕಾಲಕ್ಕೆ ಜಾನ್ ಮಾಲ್ಕಮ್ ಲಾರ್ಡ್ ಲೇಕ್‌ನ ಕಾರ್ಯದರ್ಶಿಯಾಗಿದ್ದು ಈಗ ಆತ ಮುಂಬಯಿಯ ಲೆಫ್ಟಿನೆಂಟ್ ಗವ್ಹರ್ನರ್ ಆಗಿದ್ದ. ಈ ಆಜ್ಞೆಯನ್ನು ಅವನ ಅಭಿಪ್ರಾಯಕ್ಕಾಗಿ ಮುಂಬಯಿಗೆ ಕಳಿಸಲಾಯಿತು. ಸರ್ ಜಾನ್ ಮಾಲ್ಕಮ್ ಗಾಲಿಬನ ವಾದದತ್ತ ಗಮನ ಹರಿಸುವ ಬದಲು, ನವಾಬ್ ಅಹಮ್ಮದ್ ಬಕ್ಷ್ ಖಾನ್‌ನೊಬ್ಬ ಮರ್ಯಾದಸ್ಥ ಸದ್‌ಗೃಹಸ್ಥನಾಗಿದ್ದು ಲಾರ್ಡ್ ಲೇಕ್‌ನ ವಿಶ್ವಾಸಕ್ಕೆ ಪಾತ್ರನಾಗಿದ್ದ ವ್ಯಕ್ತಿಯಾಗಿದ್ದ; ಅಂಥವನು ಇಂಥ 'ಬನಾವಟೀ' ಆಜ್ಞೆ ಹೊರಡಿಸುವಂಥ ಕೆಳಪಾತಳಿಗಿಳಿದಾನೆಂದು ಊಹಿಸುವುದೂ ಅಸಾಧ್ಯವೆಂದು ಅಭಿಪ್ರಾಯ ಪಟ್ಟನು! ಆ ಆಜ್ಞೆ ಅಧಿಕೃತವೇ ಆಗಿದೆಯೆಂದೂ ಅದನ್ನು ಅಧಿಕೃತ ಆಧಾರವೆಂದೇ ಗ್ರಹಿಸಬೇಕೆಂದೂ ಸರ್ ಜಾನ್ ಬರೆದು ಕಳಿಸಿದ. ಅದರಿಂದಾಗಿ, ಗವ್ಹರ್ನರ್ ಜನರಲ್-ಇನ್-ಕೌನ್ಸಿಲ್ ಪ್ರಚಲಿತ ವ್ಯವಸ್ಥೆಯಲ್ಲಿ ಯಾವ ಬದಲಾವಣೆಗೈಯುವುದೂ ಸಾಧ್ಯವಿಲ್ಲವೆಂಬ ತೀರ್ಮಾನಕ್ಕೆ ಬಂದು ಬಿಟ್ಟ. ಅರ್ಥಾತ್ ಗಾಲಿಬನ ಪರಿಶ್ರಮವೆಲ್ಲ ವ್ಯರ್ಥವಾಯಿತು.

ಗವ್ಹರ್ನರ್ ಜನರಲ್-ಇನ್-ಕೌನ್ಸಿಲ್‌ನ ತೀರ್ಮಾನವೇನೆಂದು ತಿಳಿಯಲು ಗಾಲಿಬನೇನೂ ಕಾಯ್ದು ನಿಂತಿರಲಿಲ್ಲ. ಅವನು ಆಗಲೇ ಕಲ್ಕತ್ತೆಯಿಂದ ಹೊರಟು 1829ರ ನವಂಬರ್ ಕೊನೆಯಲ್ಲಿ ದೆಹಲಿ ತಲುಪಿದ್ದ. ಈ ಕಲ್ಕತ್ತೆಯ ಪಯಣ ಹಲವೊಂದು ದೃಷ್ಟಿಯಿಂದ ಅವನ ಜೀವನದಲ್ಲೇ ಬಲು ಮಹತ್ವದ್ದೆನಿಸಿತು.

## ಕಲ್ಕತ್ತೆಯಲ್ಲಿ ಸಾಹಿತ್ಯಿಕ ಸುಂಟರಗಾಳಿ

ಗಾಲಿಬ್ ಕಲ್ಕತ್ತೆಯಲ್ಲಿ ಆಗಮಿಸುತ್ತಲೇ ಕಲ್ಕತ್ತಾ ಕಾಲೇಜಿನ ಸಾಹಿತ್ಯ ಸಂಘದವರೊಂದು ಕಾವ್ಯಗೋಷ್ಠಿ ಏರ್ಪಡಿಸಿದರು. ಗಾಲಿಬನೂ ಅದರಲ್ಲಿ ಭಾಗವಹಿಸಿ, ತನ್ನದೆರಡು ಉರ್ದು ಗಝಲ್‌ಗಳನ್ನು ಸಾದರ ಪಡಿಸಿದ. ಕಲ್ಕತ್ತೆಯಲ್ಲಿಯ ಬಹುಸಂಖ್ಯ ಕವಿಗಳು 'ಖತೀಲ್', ಕವಿಯ ಶಿಷ್ಯರೋ, ಉತ್ಸಾಹೀ ಪ್ರಶಂಸಕರೋ ಆಗಿದ್ದವರು. ಗಾಲಿಬ್ ತನ್ನ ಕವನವನ್ನು ಓದಿದ ಬಳಿಕ ಖತೀಲ್‌ನ ವಿಚಾರಧಾರೆಯ ಸಮರ್ಥಕರಿಂದ ಅವನ ಮೇಲೆ ಕಟು ಟೀಕೆಯ ಮಿಂಚೆರಗಿತು. ಗಾಲಿಬ್ ಭಾರತದ ಪರ್ಶಿಯನ್ ವಿದ್ವಾಂಸರಿಗೆಂದೂ ಮಹತ್ವ ಕೊಟ್ಟವನಲ್ಲ. ಏಕಾಗ್ರತೆ ಮತ್ತು ಸ್ವಂತ ಪರಿಶ್ರಮದಿಂದ ಯಾರೂ ಯಾವ ಭಾಷೆಯನ್ನಾಗಲಿ ಕಲಿಯಬಹುದು, ಅದರ ಮೇಲೆ ಪ್ರಭುತ್ವವನ್ನೂ ಸಾಧಿಸಬಹುದು. ಆದರೆ ಅದರ ಸರಿಯಾದ ಬಳಕೆ ಮಾಡುವುದು ಹೇಗೆ, ಅದರ ವಾಕ್ಸಂಪ್ರದಾಯವೇನು ಎಂದೆಲ್ಲ ತಿಳಿಯಬೇಕಾದರೆ ಆಯಾ ದೇಶದ ಜನರ ಅಥವಾ ಅವರ ಗ್ರಂಥಗಳ ಪ್ರಮಾಣ ಬೇಕಾಗುತ್ತದೆ. ಆ ದೇಶದ ಹೊರಗಿನ ಜನ-ಅವರೆಷ್ಟು ದೊಡ್ಡ ವಿದ್ವಾಂಸರೆನಿಸಿದ್ದರೂ-ಈ ವಿಷಯದಲ್ಲಿ ಪ್ರಶ್ನಾತೀತ ಪ್ರಮಾಣವೀಯುವುದು ಸಾಧ್ಯವೇ ಇಲ್ಲವೆಂದು ಗಾಲಿಬ್ ವಾದಿಸಿದ. ಖತೀಲ್ ಭಾರತೀಯನಾದ್ದರಿಂದ, ತಾನು ಮಾಡಿದ ಪ್ರಯೋಗವೊಂದು ಸರಿಯೋ ತಪ್ಪೋ ಎಂದು ತೀರ್ಮಾನಿಸುವ ಅಧಿಕಾರ ಅವನಿಗಿಲ್ಲ ಎಂಬುದು ಗಾಲಿಬನ ಸ್ಪಷ್ಟ ಅಭಿಪ್ರಾಯವಾಗಿತ್ತು. ಖತೀಲ್‌ನ ಬಗ್ಗೆ ಒಂದಿಷ್ಟು ಅವಮಾನಕರ ಭಾಷೆಯಲ್ಲೇ ಅವನು ಮಾತನಾಡಿದ. ಅದರಿಂದ ಅಲ್ಲಿ ಸೇರಿದ್ದ ಖತೀಲ್‌ನ ಅಭಿಮಾನಿಗಳು ಸ್ವಾಭಾವಿಕವಾಗಿಯೇ ಸಿಡಿಮಿಡಿಗೊಂಡರು. ಅವರು ಖತೀಲನ ಕಾವ್ಯ ಹಾಗು ವಿದ್ವತ್ತಿನ ಬಗ್ಗೆ ಅಪಾರ ಗೌರವವುಳ್ಳವರು. ಅಂತೆಯೇ ಗಾಲಿಬನ ತಲೆಗೆ ಅಪ್ಪಳಿಸುವಂಥ ರಭಸದ ಟೀಕೆಯ ಸುಂಟರಗಾಳಿಯೇ ಬೀಸಿತು. ತನ್ನ ವಿರುದ್ಧ ಮೌಖಿಕವಾಗಿ ಹಾಗು ಪತ್ರಿಕೆಗಳಲ್ಲಿ ಬಂದ ಟೀಕೆ-ಟಿಪ್ಪಣಿಗಳಿಗೆಲ್ಲ ಉತ್ತರಿಸುವುದು ಅನಿವಾರ್ಯವಾಯಿತು. ಅದರಿಂದ ವಾತಾವರಣ ಕೊಂಚ ಮಟ್ಟಿಗೆ ತಿಳಿಗೊಂಡರೂ ಸಂಪೂರ್ಣವಾಗಿ ತೊಳೆದು ಹೋಗಲಿಲ್ಲ. ಈ ದುರ್ದೈವೀ ಘಟನೆ ಅವನ ಸಾಹಿತ್ಯ ಸಾಧನೆಯ ಮೇಲೆ ಅಚ್ಚಳಿಯದ ಪರಿಣಾಮವನ್ನುಂಟು ಮಾಡಿತಲ್ಲದೆ, ಭಾರತದಲ್ಲಿದ್ದ ಪರ್ಶಿಯನ್ ಪಂಡಿತರ ಬಗೆಗೆ ಅವನಲ್ಲಿದ್ದ ತಾತ್ಸರಭಾವ ಒಳಗೊಳಗೇ ಬೆಳೆಯುತ್ತ ಹೋಗುವಂತಾಯ್ತು.

## ಕಲ್ಕತ್ತೆಯ ಸಾಂಸ್ಕೃತಿಕ ಪ್ರಭಾವ

ಈ ಕಲ್ಕತ್ತಾ ಪ್ರಯಾಣದ ಇನ್ನೊಂದು ಪ್ರಯೋಜನವೆಂದರೆ ಅವನ ಜೀವನದೃಷ್ಟಿಯ ಮೇಲಾದ ಸತ್ಪ್ರಭಾವ. ಕಲ್ಕತ್ತೆ ಆಗಿನ ಕಾಲದ ಭಾರತದ ಅತ್ಯಂತ ಪ್ರಗತಿಶೀಲ ನಗರ - ಬ್ರಿಟಿಷರಾಡಳಿತ ಆರಂಭಗೊಂಡ ಬಳಿಕ ಅತ್ಯಂತ ಆಧುನಿಕ ಮತ್ತು

ಹೊಸಗಾಲಕ್ಕೆ ತಕ್ಕ ವೈಜ್ಞಾನಿಕ ಸಂಶೋಧನೆಗಳು ಅಲ್ಲಿ ಮನೆಮಾತಾಗಿದ್ದವು. ಕಲ್ಕತ್ತಾ ಬಂದರು ಸರಕು-ಸಾಗಾಣಿಕೆಯ ಚಟುವಟಿಕೆಗಳ ಕೇಂದ್ರವಾಗಿತ್ತು. ವಿಶ್ವದ ನಾಲ್ದೆಸೆಗಳಿಂದಲೂ ಸರಕು-ಸಾಮಾನು ತುಂಬಿದ ಹಡಗುಗಳು ಇಲ್ಲಿಗೆ ಬರುತ್ತಿದ್ದವು. ಕಲ್ಕತ್ತಾದಲ್ಲಿ ಕಾಲೂರಿದ್ದ ಆಂಗ್ಲ ಸಮಾಜ ಅಲ್ಲಿಯ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದ ಸೌಮ್ಯ ಹಾಗು ಸಾವಧಾನ ಗತಿಯ ಪೌರ್ವಾತ್ಯ ವಾತಾವರಣವೇ ಬದಲಾವಣೆಗೊಳ್ಳಲು ಕಾರಣವಾಗಿತ್ತು. 19ನೆಯ ಶತಮಾನದಾದಿಯಲ್ಲಿ ಆರಂಭಗೊಂಡ ಫೋರ್ಟ್ ವಿಲಿಯಮ್ ಕಾಲೇಜ್ ಹಲವೊಂದು ಸ್ವತಂತ್ರ ಉರ್ದು ಗ್ರಂಥಗಳನ್ನೂ ಇಂಗ್ಲೀಷ್ ಹಾಗು ಕೆಲವು ಪೌರ್ವಾತ್ಯ ಭಾಷೆಗಳಿಂದ ಅನುವಾದಗೊಂಡ ಗ್ರಂಥಗಳನ್ನೂ ಪ್ರಕಟಿಸಿ ಉರ್ದು ಗದ್ಯ ಸಾಹಿತ್ಯದಲ್ಲೊಂದು ಹೊಸ ಶೈಲಿಯೇ ನಿರ್ಮಾಣಗೊಳ್ಳುವಂತೆ ಮಾಡಿತ್ತು. ಕಲ್ಕತ್ತಾದೊಳಗೊಂದು ದೊಡ್ಡದಾದ ಇರಾನೀ ವ್ಯಾಪಾರಿಗಳ ಹಾಗು ಪ್ರವಾಸಿಗಳ ವಸಾಹತು ಇತ್ತು. ಗಾಲಿಬ್ ಅದರೊಡನೆ ನಿಕಟ ಸಂಪರ್ಕ ಹೊಂದಿದ ಪರಿಣಾಮವಾಗಿ ಅವನಿಗೆ ಆಧುನಿಕ ಪರ್ಶಿಯನ್ ಕಲಿತುಕೊಳ್ಳುವುದು ಸಾಧ್ಯವಾಯಿತು. ಈ ಎಲ್ಲ ಸಂಗತಿಗಳು ಒಟ್ಟಾಗಿ ಅವನ ಸಾಹಿತ್ಯದೃಷ್ಟಿ ಮಾತ್ರವಲ್ಲದೆ ಜೀವನದೃಷ್ಟಿಯನ್ನೂ ಬದಲಾಯಿಸಲು ಕಾರಣವಾದವು; ಸಾಮಾಜಿಕ, ರಾಜಕೀಯ ಹಾಗು ಆರ್ಥಿಕ ವಿಷಯಗಳಲ್ಲಿ ಹೊಸ ಆಲೋಚನೆಗಳಿಗೆ ತೊಡಗುವಂತೆ ಮಾಡಿದವು.

ಹೀಗೆ, ಅವನು ಕೈಕೊಂಡ ಸುದೀರ್ಘ ಹಾಗು ಆಯಾಸದಾಯಕ ಪಯಣದ ಮೂಲ ಉದ್ದೇಶವೇ ಈಡೇರದೆ ಹೋದರೂ ಬೌದ್ಧಿಕವಾಗಿ ಹಾಗು ಸಾಮಾನ್ಯ ತಿಳುವಳಿಕೆಯ ದೃಷ್ಟಿಯಿಂದ ಈ ಪಯಣ ಬಲು ಪ್ರಯೋಜನಕಾರಿಯಾಗಿ ಪರಿಣಮಿಸಿತು. ಪರ್ಶಿಯನ್ ಭಾಷೆಯ ಪ್ರಭಾವದಿಂದಾಗಿ ಉರ್ದು ಗದ್ಯ ಸಾಹಿತ್ಯವು ಪರ್ಶಿಯನ್ ವಾಕ್‌ಸರಣಿ ಮತ್ತು ಪದಪುಂಜಗಳಿಂದಲೇ ತುಂಬಿ ಕೊಂಡಿತ್ತು; ಮೂಗಿಗಿಂತ ಮೂಗುತಿಯೇ ಭಾರವಾಗಿತ್ತು. ಅದು ಸ್ವಾಭಾವಿಕವೂ ಆಗಿತ್ತು. ಅಂದಿನ ಅನೇಕ ಉರ್ದು ಲೇಖಕರು ಪರ್ಶಿಯನ್‌ನಲ್ಲೇ ವಿದ್ಯಾಭ್ಯಾಸ ಮಾಡಿದವರಾಗಿದ್ದರು. ಅಂಥವರು ಪರಿಸ್ಥಿತಿಯ ಒತ್ತಡದಿಂದಾಗಿ ಉರ್ದುವಿನಲ್ಲಿ ಬರೆಯಲಾರಂಭಿಸಿದರೂ ಆ ಭಾಷೆಯ ಬಗ್ಗೆ ಅವರಲ್ಲಿದ್ದ ಪ್ರೀತಿ-ಗೌರವಗಳು ಅಷ್ಟಕ್ಕಷ್ಟೆ. ಅವರ ಬಹಳಷ್ಟು ಬರವಣಿಗೆ ಪರ್ಶಿಯನ್ ಭಾಷೆಯಲ್ಲೇ ನಡೆಯುತ್ತಿತ್ತು. ಅವರು ಕೃಪೆದೋರಿದಂತೆ ಉರ್ದು ಭಾಷೆಯಲ್ಲಿ ಅಭಿವ್ಯಕ್ತಿ ನೀಡಲು ತೊಡಗಿದಾಗಲೂ ಪರ್ಶಿಯನ್ ಭಾಷೆಯ ಹಿನ್ನೆಲೆಯಿಂದ ಪೂರ್ತಿಯಾಗಿ ಬಿಡಿಸಿಕೊಂಡು ಹೊರಬರುತ್ತಲೇ ಇರಲಿಲ್ಲ. ಈ ಉರ್ದು ಗದ್ಯ ಸಾಹಿತ್ಯಕ್ಕೆ ಹೊಸ ಗತಿ ತಂದು ಕೊಡಲೆತ್ನಿಸಿದ ಸಂಸ್ಥೆಯೆಂದರೆ ಫೋರ್ಟ್ ವಿಲಿಯಂ ಕಾಲೇಜ್. ಇಂಗ್ಲೆಂಡ್‌ನಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಕೆಲಸಕ್ಕೆ ಸೇರಿ ಸರಕಾರಿ ವ್ಯವಸ್ಥೆಯ ಅಂಗವಾಗಿ ಭಾರತಕ್ಕೆ ಬರುವ ನವಾಗತ ಸಿಬ್ಬಂದಿ (ಲೇಖಕ) ವರ್ಗದ ಉಪಯೋಗಕ್ಕೆಂದು ಯೋಗ್ಯ ಪಠ್ಯ ಪುಸ್ತಕಗಳನ್ನು ಒದಗಿಸಿ ಕೊಡುವುದೇ ಈ ಪ್ರಯತ್ನದ ಹಿಂದಿನ ಪ್ರಮುಖ ಉದ್ದೇಶವಾಗಿತ್ತು. ಸಾಮಾನ್ಯ ಜನತೆ ತನ್ನ ನಿತ್ಯದ ವ್ಯವಹಾರಕ್ಕಾಗಿ ಬಳಸುವಂಥ ಉರ್ದು ಭಾಷೆಯನ್ನು ಅವರು ಕಲಿಯುವುದು ಅಗತ್ಯವಾಗಿತ್ತು. ಲಾರ್ಡ್

ವೆಲ್ಲೆಸ್ಲಿ ಆರಂಭಿಸಿದ ಈ ಕಾಲೇಜಿನಲ್ಲಿ ನವಾಗತ ಆಂಗ್ಲ ಕರಣಿಕರಿಗೆ ಉರ್ದು ಕಲಿಸಲಾಗುತ್ತಿತ್ತು. ಪಠ್ಯಪುಸ್ತಕಗಳ ತಯಾರಿಕೆಗಾಗಿ ದೇಶದ ಬೇರೆ ಬೇರೆ ಭಾಗಗಳಿಂದ ಅದೆಷ್ಟೋ ಲೇಖಕ, ಕವಿಗಳನ್ನು ಕರೆಸಿ ಪರ್ಶಿಯನ್ ಮತ್ತು ಅರಬ್ಬಿ ಗ್ರಂಥಗಳ ಭಾಷಾಂತರ ಮಾಡುವ ಅಥವಾ ಉರ್ದುವಿನಲ್ಲಿ ಸ್ವತಂತ್ರ ಗ್ರಂಥಗಳನ್ನೇ ರಚಿಸುವ ಕೆಲಸದಲ್ಲಿ ತೊಡಗಿಸಲಾಗುತ್ತಿತ್ತು. ಇಂಥ ಭಾಷೆ ಸರಳವಾಗಿದ್ದು ಜನಸಾಮಾನ್ಯರೊಡನೆ ಸಂಭಾಷಣೆ ನಡೆಸಲು ಅನುಕೂಲವಾಗಿರಬೇಕಾದ್ದು ಅತ್ಯಗತ್ಯವಾಗಿತ್ತು. ಗಾಲಿಬ್ ಇಂಥ ಕೆಲವು ಪುಸ್ತಕಗಳನ್ನು ಓದಿದ್ದನೆಂದು ತಿಳಿಯುತ್ತದೆ. ಸುದೀರ್ಘ ಪ್ರಸ್ತಾವನೆ ಹೊಂದಿರುವ ಪ್ರೌಢ ಶೈಲಿಯ ಪರ್ಶಿಯನ್ ಮತ್ತು ಉರ್ದುವಿಗಿಂತಲೂ ನೇರವಾಗಿ ವಿಷಯಕ್ಕಿಳಿಯುವ ಇಂಗ್ಲೀಷ್ ಪತ್ರಲೇಖನ ಪದ್ಧತಿ ಗಾಲಿಬನಿಗೆ ಬಲು ಹಿಡಿಸಿತ್ತೆಂದೂ ಅಭಿಪ್ರಾಯ ಪಡಲಾಗಿದೆ. ಆದರೆ ಅದು ಸರಿಯಲ್ಲ. ಯಾಕೆಂದರೆ ಆತ ಕಲ್ಕತ್ತೆಗೆ ಹೋಗುವ ಮುನ್ನ ತನ್ನೆಲ್ಲ ಬರವಣಿಗೆಯನ್ನು ಪರ್ಶಿಯನ್ ಭಾಷೆಯಲ್ಲಿ ಮಾಡುತ್ತಿದ್ದಾಗಲೇ ಭಾಷೆಯಲ್ಲಿರುವ ಅನವಶ್ಯಕ ಬಳಸು ದಾರಿಗಳನ್ನು ಬಿಟ್ಟು ಸರಳವಾಗಿ ಹೇಳುವುದೊಳಿತೆಂದು ಅವನೇ ಹೇಳಿದ್ದುಂಟು. ಆದರೂ ಫೋರ್ಟ್ ವಿಲಿಯಮ್ ಕಾಲೇಜಿನವರು ಪ್ರಕಟಿಸಿದ ಸರಳ ಶೈಲಿಯ ಪುಸ್ತಕಗಳನ್ನೋದಿ ಅವನ ಮನಸ್ಸು ಪ್ರಫುಲ್ಲಿತವಾದದ್ದೂ, ಅವನ ಮೊದಲಿನ ಅನಿಸಿಕೆ ಗಟ್ಟಿಗೊಂಡದ್ದೂ ಅಷ್ಟೇ ನಿಜ.

ಸುಮಾರು ಮೂರು ವರ್ಷಗಳ ಸಂಚಾರದ ನಂತರ ಆತ 1829ರ ಫೆಬ್ರವರಿ ಕೊನೆಯಲ್ಲಿ ದೆಹಲಿಗೆ ಮರಳಿ ಬಂದ.

## ಶಮಸುದ್ದೀನ್ ಅಹಮ್ಮದ್ ಖಾನನ ದುರಂತ

ಗಾಲಿಬ್ ದೆಹಲಿಯಲ್ಲಿರದಿದ್ದಾಗ ಬಲು ತೀವ್ರಗತಿಯ ಚಲನವಲನಗಳಾಗಿದ್ದವು. ಮೊದಲೇ ಹೇಳಿದಂತೆ, 1827ರ ಅಕ್ಟೋಬರ್ ತಿಂಗಳಲ್ಲಿ ನವಾಬ್ ಅಹಮ್ಮದ್ ಬಕ್ಷ್ ಖಾನ್ ತೀರಿಕೊಂಡಿದ್ದ. ಶಮಸುದ್ದೀನ್ ಅಹಮ್ಮದ್ ಖಾನ್ ಫಿರೋಜಪುರದ ಝಿರಕಾ ಮತ್ತು ಲೋಹಾರೂ ಸಂಸ್ಥಾನಗಳ ಪಟ್ಟವನ್ನು ಗಟ್ಟಿಯಾಗಿ ಹಿಡಿದು ಕೊಂಡಿದ್ದ. ಅವನಿಗೂ ಅವನ ಇಬ್ಬರು ತಮ್ಮಂದಿರಿಗೂ ಹೊಂದುತ್ತಿರಲಿಲ್ಲ. ಅವರಿಬ್ಬರೂ ಪಿತ್ರಾರ್ಜಿತ ಸಂಪತ್ತನ್ನು ಸವಿಯುವ ದಾರಿಯಲ್ಲಿ ಈತ ಹಲವೊಂದು ಅಡ್ಡಿ - ಆತಂಕಗಳನ್ನೊಡ್ಡುತ್ತಿದ್ದ. ವರ್ಷಾಶನಕ್ಕಾಗಿ ವ್ಯಾಜ್ಯ ಹೂಡಿದ ನಿಮಿತ್ತದಿಂದ ಗಾಲಿಬನಿಗೆ ಮೊದಲು ಫಿರೋಜಪುರದ ಬೊಕ್ಕಸದಿಂದ ದೊರೆಯುತ್ತಿದ್ದ ಹಣವೀಗ ನಿಂತು ಹೋಗಿತ್ತು. ಇವೆಲ್ಲವುಗಳ ಮೇಲೆ ಕಲಶವಿಟ್ಟಂತೆ, ನವಾಬನು ಬ್ರಿಟಿಷ್ ಏಜೆಂಟ್ ವಿಲಿಯಮ್ ಫ್ರೇಝರ್‌ನೊಡನೆ ಜಗಳವನ್ನೂ ಕಾದಿದ್ದ. ಅದರ ಪರಿಣಾಮ ಕೇಳಬೇಕೇ? 1835ರ ಮಾರ್ಚ್ 22ರ ರಾತ್ರಿಯ ಔತಣಕೂಟವೊಂದನ್ನು ಮುಗಿಸಿಕೊಂಡು ಫ್ರೇಝರ್ ಕುದುರೆ ಸವಾರನಾಗಿ ಕಾಶ್ಮೀರಿ ಗೇಟ್‌ನ ಬಳಿಗಿದ್ದ ತನ್ನ ಮನೆಗೆ ಮರಳಿ ಬರುತ್ತಿದ್ದಾಗ ಯಾರೋ ಗುಂಡು ಹಾಕಿ ಅವನ ಕೊಲೆಗೈದರು. ತನಿಖೆ ನಡೆಯಿತು. ನವಾಬನ

ಸಿಬ್ಬಂದಿಯಲ್ಲಿದ್ದ ಕರೀಮ್‌ಖಾನ್ ಎಂಬುವವನನ್ನು ಕೊಲೆಯ ಆರೋಪದ ಮೇಲೆ ಬಂಧಿಸಲಾಯಿತು. ಹೆಚ್ಚಿನ ತನಿಖೆಯಲ್ಲಿ ಸ್ವತಃ ನವಾಬನ ಕೈವಾಡವೇ ಆ ಕೊಲೆಯಲ್ಲಿದ್ದ ಸಂಗತಿಯೂ ಬೆಳಕಿಗೆ ಬಂತು. ಇಬ್ಬರ ಮೇಲೂ ಮೊಕದ್ದಮೆ ಹೂಡಲಾಯಿತು. ಪ್ರತ್ಯಕ್ಷ ಕೊಲೆಗಾರನನ್ನು 1835 ರ ಆಗಸ್ಟ್ 26 ರಂದು ಗಲ್ಲಿಗೇರಿಸಲಾಯಿತು. ಈ ಕೊಲೆಗೆ ಪ್ರಚೋದನೆ ನೀಡಿದ ಅಪರಾಧಕ್ಕಾಗಿ ನವಾಬನಿಗೂ ಅದೇ ಶಿಕ್ಷೆಯಾಗಬೇಕೆಂದು ದೆಹಲಿಯ ನ್ಯಾಯಾಧೀಶನು ಕಲ್ಕತ್ತೆಯಲ್ಲಿದ್ದ ಗವ್ಹರ್ನರ್ ಜನರಲ್‌ನಿಗೆ ಮೊಕದ್ದಮೆಯ ಪೂರ್ಣ ವಿವರಗಳೊಂದಿಗೆ ಶಿಫಾರಸು ಮಾಡಿದ. ಈ ಕುತ್ತಿನಿಂದ ತನ್ನ ಕುತ್ತಿಗೆಯುಳಿಸಿಕೊಳ್ಳಬೇಕೆಂದು ನವಾಬ್ ಬೇಕಾದಷ್ಟು ಕಸರತ್ತು ನಡೆಸಿದರೂ ಸಫಲನಾಗಲಿಲ್ಲ. ದೆಹಲಿಯ ನ್ಯಾಯಾಧೀಶ ಮಾಡಿದ ಶಿಫಾರಸ್ಸನ್ನು ಗವ್ಹರ್ನರ್ ಜನರಲ್-ಇನ್-ಕೌನ್ಸಿಲ್ ಸ್ವೀಕರಿಸಿದ. ಕೊನೆಗೆ, 1835ರ ಅಕ್ಟೋಬರ್ 8 ರಂದು ನವಾಬನನ್ನೂ ಗಲ್ಲಿಗೇರಿಸಲಾಯಿತು.

ಈ ಘಟನೆಯಿಂದಾಗಿ ಪರಿಸ್ಥಿತಿಯಲ್ಲಿ ಬಹಳಷ್ಟು ಬದಲಾವಣೆ ಬಂತು. ಬ್ರಿಟಿಷರು ಅಹಮ್ಮದ್ ಬಕ್ಷ್ ಖಾನ್‌ನಿಗಿತ್ತ ಫಿರೋಜಪುರದ ಝಿರಕಾ ಮರಳಿ ಅವರ ಕೈವಶವಾಯಿತು. ಅಲ್ವಾರ್‌ದ ಮಹಾರಾವ್ ನೀಡಿದ್ದ ಲೋಹಾರೂ ಸಂಸ್ಥಾನ ಮಾತ್ರ ಆ ಪರಿವಾರದ ಕೈಯಲ್ಲೇ ಉಳಿಯಿತು. ಶಮಸುದ್ದೀನ್ ಅಹಮ್ಮದ್ ಖಾನ್‌ನ ತಮ್ಮ ಅಮೀನುದ್ದೀನ್ ಅಹಮ್ಮದ್ ಖಾನನನ್ನು ಲೋಹಾರೂ ಸಂಸ್ಥಾನದ ನವಾಬನೆಂದು ಘೋಷಿಸಲಾಯಿತು. ಈ ಸಂಸ್ಥಾನದ ಆದಾಯದಲ್ಲಿ ಈವರೆಗೆ ಸಮಪಾಲುಗಾರನಾಗಿದ್ದ ಅವನ ತಮ್ಮ ಝಿಯಾ ಉದ್ದೀನ್ ಅಹಮ್ಮದ್ ಖಾನ್‌ನಿಗೆ ಇನ್ನು ಮುಂದೆಯೂ ಅದರ ಅರ್ಧ ಪಾಲು ದೊರೆಯಬೇಕೆಂದು ಮಾತಾಗಿತ್ತು. ಇನ್ನು ಮುಂದೆ ಗಾಲಿಬನ ವರ್ಷಾಶನ ಮಾತ್ರ ದೆಹಲಿಯ ಕಲೆಕ್ಟರ್ ಕಚೇರಿಯಿಂದ ಸಂದಾಯವಾಗುವ ಏರ್ಪಾಡಾಗಿತ್ತು.

ಈ ಮೊದಲು ಗಾಲಿಬ್ ಹತ್ತು ಸಾವಿರ ರೂ. ಗಳ ವರ್ಷಾಶನಕ್ಕಾಗಿ ಗವ್ಹರ್ನರ್ ಜನರಲ್-ಇನ್-ಕೌನ್ಸಿಲ್‌ನಿಗೆ ಮಾಡಿಕೊಂಡ ನಿವೇದನೆ ನಿರಾಕರಿಸಲ್ಪಟ್ಟಿದ್ದರೂ ಆ ದಿಸೆಯಲ್ಲಿ ಗಾಲಿಬನ ಹೋರಾಟ ಮುಂದುವರಿದೇ ಇತ್ತು. ಆದರೆ 1842 ರಲ್ಲಿ ಇಂಗ್ಲೆಂಡಿನ ಗೃಹಶಾಖೆಯ ಪ್ರಮುಖ ಅಧಿಕಾರಿಗಳೂ ಅವನ ಅಪೀಲನ್ನು ತಳ್ಳಿ ಹಾಕಿದರು. ಆದರೆ ಗಾಲಿಬ್ ಸುಮ್ಮನೇ ಕೂಡಲಿಲ್ಲ. ಅಂಶತಃ ಫಲವಾದರೂ ದೊರೆಯಲೆಂದು ಆತ ಪ್ರಯತ್ನವನ್ನು ಮುಂದುವರಿಸಿಯೇ ಇದ್ದ. ಕೊನೆಗೆ 1844 ರಲ್ಲಿ ಆತ ತನ್ನ ಸೋಲೊಪ್ಪಿಕೊಂಡ.

ಗಾಲಿಬನ ವರ್ಷಾಶನದ ವ್ಯಾಜ್ಯದಾರಂಭದಲ್ಲಿ ಅವನು ಮುಂದಿಸಿದ ಬೇಡಿಕೆಗಳಲ್ಲಿ ತನ್ನ ವರ್ಷಾಶನವನ್ನು ಫಿರೋಜಪುರದ ಝಿರಕಾದ ಬೊಕ್ಕಸದಿಂದ ಕೊಡದೆ ನೇರವಾಗಿ ಬ್ರಿಟಿಷ್ ಬೊಕ್ಕಸದಿಂದ ಕೊಡುವುದಾಗಬೇಕೆಂಬುದೂ ಒಂದಾಗಿತ್ತು. ಯೋಗಾಯೋಗವೆಂಬಂತೆ ನವಾಬನೂ ಉಳಿಯದೆ ಫಿರೋಜಪುರ ಝಿರಕಾ ಸಂಸ್ಥಾನವೂ ಉಳಿಯದೆ ಗಾಲಿಬನ ಆದೊಂದು ಬೇಡಿಕೆ ತಾನೇ ತಾನಾಗಿ ಈಡೇರಿದಂತಾಯಿತು.

ಗವ್ಹರ್ನರ್ ಜನರಲ್‌ನ ರಾಜಸಭೆ ಹಾಗು ದರಬಾರ್‌ಗಳಲ್ಲಿ ಹಾಜರಿರಲು ಅನುಮತಿ ದೊರೆಯಬೇಕೆಂದೂ, ಅಲ್ಲಿ ರಾಜಪೋಷಾಕಿನೊಡನೆ ಉಪಸ್ಥಿತನಿರುವ ಗೌರವವೂ ತನಗೆ ದೊರೆಯಬೇಕೆಂಬುದೂ ಅವನ ಬೇಡಿಕೆಯಾಗಿತ್ತು. ಕಲ್ಕತ್ತಾದಲ್ಲಿ ಲಾರ್ಡ್ ವಿಲಿಯಮ್ ಬೆಂಟಿಂಕ್ ಅಧಿಕಾರದಲ್ಲಿದ್ದಾಗ ಅವನ ಬೇಡಿಕೆಯ ಮೊದಲರ್ಧ ಭಾಗಕ್ಕೆ ಒಪ್ಪಿಗೆ ದೊರೆಯಿತಾದರೆ ಅವನ ವ್ಯಾಜ್ಯದ ಕೊನೆಕೊನೆಯ ಹಂತದಲ್ಲಿ ಲಾರ್ಡ್ ಎಲೆನ್‌ಬರೊ ಅಧಿಕಾರದಲ್ಲಿದ್ದಾಗ (1842-44) ರಾಜಪೋಷಾಕು ಧರಿಸುವುದಕ್ಕೂ ಅನುಮತಿ ದೊರೆಯಿತು.

ಅವನ ಈ ಹೋರಾಟ ಸುಮಾರು 15 ವರ್ಷಗಳಷ್ಟು ಸುದೀರ್ಘ ಕಾಲ ನಡೆದು ಆರ್ಥಿಕವಾಗಿ ಅವನನ್ನು ಘಾಸಿಗೊಳಿಸಿಬಿಟ್ಟಿತು. ಬೆಳೆಯುತ್ತ ಹೋದ ವೆಚ್ಚವನ್ನು ನಿಭಾಯಿಸಲು ಬೇಡಿದಷ್ಟು ಬಡ್ಡಿ ಕೊಟ್ಟು ಸಾಲದ ಮೇಲೆ ಸಾಲ ಮಾಡಬೇಕಾಯಿತು; ಮುಂದೆ ಅದನ್ನು ತೀರಿಸಲಾಗದೆ ಗೋಳಾಡಬೇಕಾಯಿತು.

# ಮೊಗಲ ದರಬಾರದೊಡನೆ ಸಂಬಂಧ

ಭೌತಿಕ ದೃಷ್ಟಿಯಿಂದ, ಈ ಹಂತದಲ್ಲಿ, ಆತ ಬಹಳೇ ಕೆಳಗಿಳಿದು ಹೋಗಿದ್ದನಾದರೂ, ದೇಶದ ಸಾಹಿತ್ಯಿಕ ವಲಯಗಳಲ್ಲಿ ಬಲು ಎತ್ತರದ ಸ್ಥಾನವನ್ನು ಸಂಪಾದಿಸಿದ್ದ. ಮೊಗಲ್ ದರಬಾರದಲ್ಲಿ ಅವನಿಗೆ ಹೇಗೆ ಪ್ರವೇಶ ದೊರೆಯಿತೆಂಬ ಬಗ್ಗೆ ಪ್ರತ್ಯಕ್ಷ ಪುರಾವೆ ನಮಗೆ ದೊರೆತಿಲ್ಲ. ಗಾಲಿಬ್ ಆಗ್ರಾದಿಂದ ದೆಹಲಿಗೆ ಬಂದಾಗ ಎರಡನೇ ಅಕಬರ ಶಹಾ ದೆಹಲಿಯ ಕೆಂಪು ಕೋಟೆಯ ಸಿಂಹಾಸನದ ಮೇಲಿದ್ದ. ಆತ ದೆಹಲಿಗೆ ಬಂದ ಬಳಿಕ ಪ್ರಾಯಶಃ ನವಾಬ್ ಅಹಮ್ಮದ್ ಬಕ್ಷ್ ಖಾನ್‌ನ ತಮ್ಮನ (ತನ್ನ ಮಾವನ) ಮನೆಯಲ್ಲಿ ಉಳಿದುಕೊಂಡಿರಬೇಕು. ಅಹಮ್ಮದ್ ಬಕ್ಷ್ ಖಾನ್ ಮೊಗಲರಸರಿಗೆ ಪರಿಚಿತನಾಗಿದ್ದುದಲ್ಲದೆ, ದರಬಾರದಲ್ಲಿ ಒಳ್ಳೆಯ ಸ್ಥಾನ ಪಡೆದವನೂ ಆಗಿದ್ದಿರಬೇಕು. ಹೀಗಾಗಿ ನವಾಬ್ ಅಹಮ್ಮದ್ ಬಕ್ಷ್ ಖಾನ್‌ನ ಮೂಲಕವೇ ಮೊಗಲ್ ದರಬಾರ್‌ದೊಡನೆ ಗಾಲಿಬ್ ಸಂಬಂಧ ಬೆಳೆದಿರಬೇಕೆಂದು ತೋರುತ್ತದೆ. ಮೊದಮೊದಲು ತಾನಾಗಿಯೇ ದೊರೆಯ ಮನವೊಲಿಸಲು ಪ್ರಯತ್ನಿಸಿರಬೇಕೆಂದೂ ಊಹಿಸಲವಕಾಶವಿದೆ. ಅವನ ಪರ್ಶಿಯನ್ ಕೃತಿ ದೀವಾನ್ ನಲ್ಲಿ ಎರಡನೇ ಅಕಬರ್ ಶಹನನ್ನು ಸ್ತುತಿಸಿ ಪದ್ಯದ ಕೊನೆಯಲ್ಲಿ ದೊರೆಯ ವಾರಸುದಾರ ರಾಜಕುಮಾರ ಸಲೀಮನ ಬಗೆಗೂ ಹೇಳಲಾದುದೊಂದು 'ಕಸೀದಾ' (ಕವನ) ದೊರೆಯುತ್ತದೆ. ಆದರೆ ಈ ಪ್ರಯತ್ನ ಸಫಲಗೊಂಡಂತೆ ಕಾಣುವುದಿಲ್ಲ. ಎರಡನೇ ಅಕಬರ್ ಶಹ ಸ್ವತಃ ಒಂದಿಷ್ಟು ಕಾವ್ಯ ಬರೆದಿದ್ದರೂ, ಇತರ ಕವಿ-ಕಲಾವಿದರ ಬಗ್ಗೆ ಅವನಲ್ಲಿ ಗೌರವವಿರಲಿಲ್ಲ. ಆದ್ದರಿಂದ ಅವನಲ್ಲಿ ಗಾಲಿಬನ ನಿರೀಕ್ಷೆಗೆ ತಕ್ಕ ಮನ್ನಣೆ ದೊರೆಯದೇ ಹೋಗಿರಬಹುದು. ಎರಡನೇ ಅಕಬರ್ ಶಹ 1837 ರಲ್ಲಿ ತೀರಿಕೊಂಡನಂತರ ಎರಡನೇ ಬಹಾದ್ದುರ್ ಶಹ ಮೊಗಲ ಸಿಂಹಾಸನವನ್ನೇರಿದ. ಈ ಹೊಸ ದೊರೆ ಉರ್ದು ಭಾಷಾ ತಜ್ಞನಾಗಿದ್ದನಷ್ಟೇ ಅಲ್ಲದೆ, ಉರ್ದು ಸಾಹಿತ್ಯದ ಚರಿತ್ರೆಯಲ್ಲೇ ಶ್ರೇಷ್ಠ ಕವಿಯೆಂದೂ ಶಾಶ್ವತ ಸ್ಥಾನ ಸಂಪಾದಿಸಿದ ಹೆಗ್ಗಳಿಕೆ ಹೊಂದಿದವನು. ಅವನು 'ಝಫರ್' ಎಂಬ ಕಾವ್ಯನಾಮದಲ್ಲಿ ಕಾವ್ಯರಚನೆ ಮಾಡುತ್ತಿದ್ದನು. ದುರ್ದೈವದಿಂದ, ಇವನ ದರಬಾರಿನಲ್ಲೂ ಗಾಲಿಬನಿಗೆ ತಕ್ಕ ಸ್ಥಾನ ಸಿಕ್ಕಿರಲಿಕ್ಕಿಲ್ಲ. ಅವನ ಬಾಲ್ಯದಲ್ಲಿ ತನಗೆ ಪಟ್ಟವೇರುವ ಯೋಗವಿಲ್ಲವೆಂದೇ ಭಾವಿಸಿಕೊಂಡಿದ್ದಾಗಿನಿಂದಲೂ 'ಝಫರ್' ತನ್ನ ಕಾಲಹರಣ ಮಾಡಲೆಂದು ಕಾವ್ಯರಚನೆ ಮಾಡುತ್ತ ಬಂದವನು. ಆರಂಭದ ದೆಸೆಯಲ್ಲಿ ಖ್ಯಾತ ಉರ್ದು ಕವಿ 'ನಸೀರ್' ಅವನ ಗುರು ಹಾಗು ಮಾರ್ಗದರ್ಶಿಯಾಗಿದ್ದನು. ಮಹಾರಾಜಾ ಚಂದೂಲಾಲ್‌ನ ಆಮಂತ್ರಣ ಸ್ವೀಕರಿಸಿ 'ನಸೀರ್' ಹೈದ್ರಾಬಾದ್‌ಗೆ (ಡೆಕ್ಕನ್) ಹೋದ ಬಳಿಕ 'ಝಫರ್' ಕೆಲಕಾಲ ಕಾಸಿಮ್ ಅಲಿ 'ಬೇಕರಾರ್' ನ

ಸಲಹೆ ಪಡೆಯುತ್ತಿದ್ದ. ಈ ಸಂಪರ್ಕವೂ ಬಹುಕಾಲ ಉಳಿಯಲಿಲ್ಲ. 1808ರಲ್ಲಿ 'ಬೇಕರಾರ್'ನೂ ಕಾಬೂಲಿನ ಅಮೀರನೊಡನೊಂದು ಒಡಂಬಡಿಕೆ ಮಾಡಿ ಬರಲು ಬ್ರಿಟಿಷರಿಂದ ವಾಯವ್ಯ ಸೀಮೆಗೆ ಕಳಿಸಲ್ಪಟ್ಟ ಮೋಂ ಸ್ಟುವರ್ಟ್ ಎಲ್ಫಿನ್‌ಸ್ಟನ್‌ನೊಡನೆ ಅವನ ಭಾಷಾಂತರಕಾರನಾಗಿ ಹೋಗಬೇಕಾಯಿತು. 'ಬೇಕರಾರ್' ಹೋದ ಬಳಿಕ, 'ಝಫರ್' ಆಗಿನ ಸಾಹಿತ್ಯ ಪ್ರಪಂಚದಲ್ಲಿ ಬಲು ಶೀಘ್ರವಾಗಿ ಪ್ರಸಿದ್ಧಿಗೆ ಬರುತ್ತಿದ್ದ ಯುವಕ ಕವಿ ಮಹಮ್ಮದ್ ಇಬ್ರಾಹಿಂ ಔಕನತ್ತ ಒಲಿದಿದ್ದ.

ಆದ್ದರಿಂದ, ಗಾಲಿಬ್ ಮೊಗಲ್ ದರಬಾರ್‌ನಲ್ಲಿ ಯೋಗ್ಯ ಸ್ಥಾನ ದೊರಕಿಸಿಕೊಳ್ಳಲು ಇದ್ದ ಏಕಮೇವ ಮಾರ್ಗವೂ ಆತ ಆಗ್ರಾದಿಂದ ದೆಹಲಿಗೆ ಬರುವ ಮುನ್ನವೇ ಮುಚ್ಚಿ ಹೋಗಿತ್ತೆಂದು ತಿಳಿಯುತ್ತದೆ. ಮುಂದೆ ಅವನು ದೊರೆಯ ಕೃಪಾದೃಷ್ಟಿಗಾಗಿ ಪ್ರಯತ್ನಿಸಿದ್ದರೆ 'ಔಕ್' ಮತ್ತು ಅವನ ಸಂಗಡಿಗರು ಅದನ್ನು ವಿರೋಧಿಸುತ್ತಿದ್ದರು. ಮಾತ್ರವಲ್ಲದೆ, ಸ್ವತಃ ಅವನು ಎರಡನೇ ಅಕಬರ್ ಶಹ ಹಾಗು ಅವನ ಮಗನ ಪ್ರಶಂಸೆ ಮಾಡಿ ಬರೆದಿದ್ದ ಕವನವೂ ಅವನ ದಾರಿಗೆ ಅಡ್ಡಗಲ್ಲಾಗಿ ನಿಲ್ಲಬಹುದಿತ್ತು. ಯಾಕೆಂದರೆ ಅವರಿಬ್ಬರೂ ಝಫರ್‌ನಿಗೆ ಮೊಗಲ್ ಸಿಂಹಾಸನ ದೊರೆಯಬಾರದೆಂದು ಮೊದಲು ಪ್ರಯತ್ನಿಸಿದ್ದರು.

ಗಾಲಿಬನಿಗೆ ತನ್ನ ಸ್ವಂತ ನೆಲ-ಬೆಲೆಗಳ ಬಗ್ಗೆ ಭರವಸೆಯಿತ್ತು. 'ಔಕ್' ಹಾಗು ಅವನ ಮಿತ್ರಮಂಡಳಿಯಿಂದಾಗಿ ಹಿಂದೇಟು ಹಾಕಬೇಕಾಗಿ ಬಂದ ಪ್ರಸಂಗದಿಂದ ಅವನಿಗೆ ತುಂಬ ಸಂಕಟವಾಗಿರಲೂ ಸಾಕು. ಅವನು ಮೊದಲಿನಿಂದಲೂ ಅಡ್ಡಿ-ಆತಂಕಗಳ ವಿರುದ್ಧ ಹೋರಾಡುತ್ತಲೇ ಬಂದವ. ಅವನಿನ್ನೂ ಮಗುವಿದ್ದಾಗಲೇ ಅವನ ತಂದೆ ತೀರಿ ಹೋಗಿದ್ದ. ಕೆಲ ಕಾಲದಲ್ಲಿ ಅವನ ಕಕ್ಕನೂ ತೀರಿ ಹೋಗಿದ್ದ. ಒಂದು ಬಗೆಯ ಅಸುರಕ್ಷತೆ ಮೊದಲಿನಿಂದಲೂ ಅವನ ಬೆಂಬತ್ತಿ ಬಂದು, ತನ್ನ ಉಪಜೀವನಕ್ಕಾಗಿ ಇನ್ನೊಬ್ಬರ ನೆರವಿನ ಮೇಲೆ ಅವಲಂಬಿಸುವಂತೆ ಮಾಡಿತ್ತು. ಅವನಿಗೆ ತಿಳುವಳಿಕೆ ಬಂದಾಗ ತನಗೂ ತನ್ನ ಪರಿವಾರಕ್ಕೂ ಸಿಗಬೇಕಾದ ಹಕ್ಕಿನ ಬಾಬತ್ತಿನಲ್ಲಿ ಮೋಸ ನಡೆದಿದೆಯೆಂಬ ಅರಿವು ಮೂಡಿತು. ತಮ್ಮ ಹಕ್ಕನ್ನು ಪ್ರಸ್ಥಾಪಿಸುವ ಉದ್ದೇಶದಿಂದ ಕಾನೂನಿನ ಸೆರಗು ಹಿಡಿದು ದೀರ್ಘಕಾಲ ಹೋರಾಡಿ, ಸೋತು ಆರ್ಥಿಕವಾಗಿ ಭಾರೀ ನಷ್ಟಕ್ಕೊಳಗಾದ. ಇದೆಲ್ಲದರ ಪರಿಣಾಮವಾಗಿ, ಇಂಥ ಅನ್ಯಾಯ - ಅಕ್ರಮಗಳನ್ನೆಲ್ಲ ಸಹಿಸಿಕೊಂಡು ಸುಮ್ಮನಿರುವ ಸಮಾಜದ ಬಗ್ಗೆಯೇ ಅವನಲ್ಲೊಂದು ಬಂಡಾಯ ಪ್ರವೃತ್ತಿ ಜಾಗೃತಗೊಂಡಿರಬೇಕು.

ಯಾರೊಬ್ಬನ ಸುತ್ತಲೂ ಭೌತಿಕವಾಗಿ ಇಂಥ ಪ್ರತಿಕೂಲ ವಾತಾವರಣ ಹರಡಿಕೊಂಡಾಗ ಅವನ ಬೌದ್ಧಿಕ ಮತ್ತು ನೈತಿಕ ಸಾಮರ್ಥ್ಯಗಳಿಗೆ ಮನ್ನಣೆ ಸಿಕ್ಕರೆ ಅವನಿಗೆಷ್ಟೋ ನೆಮ್ಮದಿ ದೊರೆಯುತ್ತದೆ. ಎರಡನೇ ಬಹಾದ್ದೂರ್ ಶಹನ ದರಬಾರ್ ಎಷ್ಟೇ ಚಿಕ್ಕದಾಗಿದ್ದರೂ ಗಾಲಿಬನ ಯೋಗ್ಯತೆಗೆ ಮನ್ನಣೆ ನೀಡಬಹುದಾದ ಒಂದೇ ಒಂದು ಸಾಧನ ಅದಾಗಿತ್ತು. ಆದರೆ, ಗಾಲಿಬ್ ದೆಹಲಿಯ ದೃಶ್ಯದಲ್ಲಿ ಪ್ರವೇಶಿಸಲು ತಡವಾದ ಕಾರಣ ಆ ಅವಕಾಶವೂ ತಪ್ಪಿಹೋಯಿತು. ತತ್ಪರಿಣಾಮವಾಗಿ ಅವನಲ್ಲಿ ತತ್ಕಾಲೀನ ಸಾಹಿತ್ಯ ಪ್ರಪಂಚದ ಬಗೆಗೇ ತಾತ್ಸಾರ ಮೂಡಿಕೊಂಡಿದ್ದರೆ ಅಚ್ಚರಿಯೇನಲ್ಲ.

ಅದು ಮುಂದೆ ಅವನ ಬಲವಾಗಿಯೂ ಪರಿಣಮಿಸಿತು; ದೌರ್ಬಲ್ಯವಾಗಿಯೂ ಪರಿಣಮಿಸಿತು. ಯಾವುದೇ ಅನುಗ್ರಹಕ್ಕಾಗಿ ಇನ್ನೊಬ್ಬರೆದುರು ಹೋಗಿ ನಿಲ್ಲಕೂಡದೆಂಬ ನಿರ್ಧಾರವೇ ಅವನ ಬಲವೆನಿಸಿದರೆ, ಪ್ರತಿಕೂಲ ಪರಿಸ್ಥಿತಿಯಲ್ಲಿ ಹೇಗೆ ಹೊಂದಿಕೊಂಡು ಹೋಗಬೇಕೆಂಬ ಹಠ ಸಾಧಿಸದೇ ಹೋದದ್ದು ಅವನ ದೌರ್ಬಲ್ಯವೆನಿಸಿತು.

## ಉರ್ದು ದೀವಾನ್

ಅವನಿಗೆ ರಾಜದರಬಾರ್‌ನಲ್ಲಿ ಮನ್ನಣೆಯೇನೋ ಸಿಗಲಿಲ್ಲ, ನಿಜ. ಆದರೆ ಅವನ ಹಿರಿಮೆ-ಗರಿಮೆಗಳನ್ನು ಗುರುತಿಸಿ, ಅವನೊಬ್ಬ ದೊಡ್ಡ ಕವಿ ಹಾಗು ಲೇಖಕನೆಂದು ಗೌರವಿಸುವ ರಸಿಕರಿದ್ದೇ ಇದ್ದರು. ಕ್ರಮೇಣ ಆತ ತನ್ನ ಸತತ ಪರಿಶ್ರಮದಿಂದ ಹಲವೊಂದು ವಿದ್ವಾಂಸರ ವಿಶ್ವಾಸಕ್ಕೆ ಪಾತ್ರನಾದ; ವಿಮರ್ಶಕ ವರ್ಗದ ಸ್ನೇಹವನ್ನೂ ಸಂಪಾದಿಸಿಕೊಂಡ. ಓರ್ವ ಸ್ನೇಹಿತನ ಸಲಹೆಯಂತೆ ಗಾಲಿಬ್ ತನ್ನ ಉರ್ದು ಕೃತಿ ದೀವಾನ್ ಪರಿಷ್ಕರಿಸಿ ಸರಿಯಾದ ಅರ್ಥ ಸೂಸದ ಹಾಗು ರಚನಾಕ್ರಮದಲ್ಲಿ ದೋಷವುಳ್ಳ ಪದ್ಯಗಳನ್ನು ತೆಗೆದು ಹಾಕಿದ. ಸುಮಾರು 1100 ದ್ವಿಪದಿಗಳನ್ನೊಳಗೊಂಡ ಅವನ ಉರ್ದು ಕಿರುಕೃತಿ ದೀವಾನ್ ಪ್ರಥಮ ಬಾರಿಗೆ ಪ್ರಕಟಗೊಂಡದ್ದು 1841ರಲ್ಲಿ.

ಅದಾದನಂತರ ಅವನ ಪರ್ಶಿಯನ್ ದೀವಾನ್ 1845ರಲ್ಲಿ ಪ್ರಕಟವಾಯಿತು. ಅದರಲ್ಲಿ 6,700 ರಷ್ಟು ದ್ವಿಪದಿಗಳಿದ್ದು ಗಾತ್ರದಲ್ಲೂ ಅದು ದೊಡ್ಡದಾಗಿಯೇ ಇತ್ತು. ಈ ಎರಡು ಗ್ರಂಥಗಳ ಪ್ರಕಟಣೆಯಿಂದಾಗಿ ಅವನೊಬ್ಬ ಸಮರ್ಥ ಉರ್ದು ಮತ್ತು ಪರ್ಶಿಯನ್ ಕವಿಯೆಂದು ಖ್ಯಾತಿ ಪಡೆದುದಲ್ಲದೆ ಮಿತ್ರ-ಶತ್ರುಗಳಿಬ್ಬರೂ ಅವನ ಕಾವ್ಯಕ್ಷಮತೆಯನ್ನು ಒಪ್ಪಿಕೊಳ್ಳುವಂತಾಯಿತು. 1847ರಲ್ಲಿ ಉರ್ದು ದೀವಾನ್ ದ ದ್ವಿತೀಯ ಆವೃತ್ತಿ ಪ್ರಕಟವಾಯಿತೆಂಬ ಸಂಗತಿಯಿಂದಲೇ ಆತ ಸಾಹಿತ್ಯಿಕ ವಲಯಗಳಲ್ಲಿ ಅದೆಷ್ಟು ತೀವ್ರವಾಗಿ ಜನಪ್ರಿಯಗೊಂಡನೆಂಬುದು ಸಿದ್ಧವಾಗುತ್ತದೆ.

## ಆರ್ಥಿಕ ದುಃಸ್ಥಿತಿ

ದೊಡ್ಡ ಕವಿಯೆಂದು ಖ್ಯಾತಿ ಪಡೆಯುವ ಮಾತು ಬೇರೆ; ನೆಮ್ಮದಿಯಿಂದ ಜೀವನ ಸಾಗಿಸುವ ಮಾತು ಬೇರೆ. ಬಹುಶಃ ಅವನು ಕೊರತೆಗಳ ಪರಧಿಯಲ್ಲಿಯೇ ಸದಾಕಾಲ ಬದುಕಿದ್ದವನು. ಅವನ ತಾಯಿ ಜೀವದಿಂದಿರುವವರೆಗೆ ಅವಳು ಆರ್ಥಿಕ ನೆರವು ನೀಡುತ್ತಿದ್ದಳು. ಅವಳು ಯಾವಾಗ ತೀರಿಕೊಂಡಳೆಂದು ನಿಶ್ಚಿತವಾಗಿ ಹೇಳಲಿಕ್ಕಾಗದಿದ್ದರೂ, 1840ರ ಸುಮಾರಿಗೆ ಆಕೆ ತೀರಿಕೊಂಡಿರಬಹುದೆಂದು ಊಹಿಸಲು ಅವಕಾಶವಿದೆ. ಅದಾದನಂತರ ಗಾಲಿಬನ ಆರ್ಥಿಕ ಆಧಾರವೇ ತಪ್ಪಿ ಹೋದಂತಾಯಿತು. ನವಾಬ್ ಅಹಮ್ಮದ್ ಬಕ್ಷ್ ಖಾನನೂ 1827 ರಲ್ಲೇ ತೀರಿಕೊಂಡಿದ್ದನು. ಅಂತೆಯೇ ಅವನಿಂದ ಸಿಗುತ್ತಿದ್ದ ಆರ್ಥಿಕ ನೆರವೂ ನಿಂತು ಹೋಗಿತ್ತು. ಸುದೀರ್ಘ ಕಾಲ ನಡೆದ ವ್ಯಾಜ್ಯವೂ ಅವನ ಆರ್ಥಿಕ ಸ್ಥಿತಿಯನ್ನು

ಹಾಳ್ಗೆಡವಿತಲ್ಲದೆ ಅವನು ಸಾಲಗಾರರ ಹಂಗಿನಲ್ಲಿ ಪರದಾಡುವಂತೆ ಮಾಡಿತು. ಅವನು ಈ ಕಷ್ಟದ ಸಂಕೋಲೆಯಿಂದ ಹೊರಬೀಳುವಂತಾಗಲೆಂದು ಅವನೂ ಅವನ ಮಿತ್ರರೂ ಸೇರಿ ಅವನಿಗಾಗಿ ಅಧಿಕ ಆದಾಯದ ದಾರಿಯರಸುವುದು ಅನಿವಾರ್ಯವಾಯಿತು.

## ದೆಹಲಿ ಕಾಲೇಜ್ ಪ್ರಸಂಗ

1840 ರಲ್ಲಿ ಅಂಥದೊಂದು ಅವಕಾಶ ತಾನಾಗಿಯೇ ಅರಸುತ್ತ ಬಂತು; ಆದರೆ ಗಾಲಿಬ್ ಅದರ ಪ್ರಯೋಜನ ಪಡೆಯದೇ ಹೋದ. ದೆಹಲಿ ಕಾಲೇಜಿನ ಸಂದರ್ಶಕ ಜೇಮ್ಸ್ ಥಾಮ್‌ಸನ್ ಕಾಲೇಜಿನ ತಪಾಸಣೆಗೆಂದು ಬಂದಾಗ ಅಲ್ಲಿ ಪರ್ಶಿಯನ್ ಕಲಿಸುವ ಯೋಗ್ಯ ವ್ಯವಸ್ಥೆಯಿರಲಿಲ್ಲವೆಂಬ ಸಂಗತಿ ಅವನ ಗಮನಕ್ಕೆ ಬಂತು. ಈ ಕೊರತೆಯನ್ನು ತುಂಬಿಕೊಳ್ಳಬೇಕೆಂದು ಆತ ಶಿಫಾರಸು ಮಾಡಿದ. ಆಗ ದೆಹಲಿಯಲ್ಲಿ ಪರ್ಶಿಯನ್ ಭಾಷೆಯ ಮೇಲೆ ಪ್ರಭುತ್ವವುಳ್ಳ ಪ್ರಸಿದ್ಧ ಉರ್ದು ಕವಿ ಗಾಲಿಬ್, ಮೋಮಿನ್ ಮತ್ತು ಪರ್ಶಿಯನ್ ವಿದ್ವಾಂಸ ಇಮಾಮ್ ಬಕ್ಷ್ ಸಹಬಾಯ - ಹೀಗೆ ಮೂವರಿದ್ದು ಅವರಲ್ಲಿ ಬೇಕಾದ ಒಬ್ಬರನ್ನು ಕಾಲೇಜಿನ ಕೆಲಸಕ್ಕೆ ನೇಮಿಸಬಹುದೆಂದು ಥಾಮಸನ್‌ನಿಗೆ ಸೂಚಿಸಲಾಯಿತು. ಸರಿ, ಥಾಮಸನ್‌ನಿಂದ ಮೊದಲು ಗಾಲಿಬನಿಗೇ ಕರೆ ಹೋಯ್ತು. ಭಾರತ ಸರಕಾರದ ಕಾರ್ಯದರ್ಶಿಯಾಗಿದ್ದ ಥಾಮಸನ್‌ನಿಗೆ ಮೊದಲೇ ಗಾಲಿಬನ ನಿಕಟ ಸಂಪರ್ಕ ಬಂದಿತ್ತು. ರಾಜ ದರಬಾರಗಳಲ್ಲಿ 'ಕುರ್ದೀ ನಶೀನ್' ಗೌರವ ಪದಕ್ಕೆ ಪಾತ್ರನಾಗಿದ್ದ ಗಾಲಿಬನಿಗೂ ಥಾಮಸನ್‌ನ ಪರಿಚಯವಿದ್ದೇ ಇತ್ತು. ಥಾಮಸನ್‌ನ ಕರೆಗೆ ಓಗೊಟ್ಟು ಗಾಲಿಬ್ ಎಂದಿನಂತೆ ಪಲ್ಲಕ್ಕಿಯಲ್ಲಿ ಕುಳಿತು ಅವನ ಬಂಗಲೆಗೆ ಹೋದ. ಅವನ ಬಂಗಲೆಯ ಮಹಾದ್ವಾರದವರೆಗೆ ಹೋಗಿ, ಒಳಗಿನಿಂದ ತನ್ನನ್ನು ಆದರದಿಂದ ಬರಮಾಡಿಕೊಳ್ಳಲು ಯಾರಾದರೂ ಹೊರಗೆ ಬರಬಹುದೆಂಬ ನಿರೀಕ್ಷೆಯಲ್ಲಿ ಕಾಯ್ದು ನಿಂತ. ಗವ್ಹರ್ನರ್ ಜನರಲ್‌ನ ರಾಜಸಭೆಗಳಲ್ಲಿ ಉಪಸ್ಥಿತರಿರುವ ಮನ್ನಣೆಯುಳ್ಳ ಯಾರು ಮನೆಗೆ ಬಂದರೂ ಅವರನ್ನು ಮರ್ಯಾದೆಯಿಂದ ಒಳಗೆ ಬರಮಾಡಿಕೊಳ್ಳುವುದು ರೂಢಿ. ಗಾಲಿಬನಿಗೂ ಥಾಮಸನ್‌ನಿಂದಲೇ ಈ ಮೊದಲು ಇಂಥ ಮರ್ಯಾದೆ ದೊರೆತಿತ್ತು. ಅಂತೆಯೇ ಗಾಲಿಬ್ ಅವನ ಬಾಗಿಲ ಬಳಿ ಕಾಯ್ದು ನಿಂತದ್ದು. ಕೊಂಚ ಕಾಲದ ನಂತರ, ಥಾಮಸನ್‌ನೇ ಹೊರಬಂದು ಗಾಲಿಬ್ ಒಳಗೇಕೆ ಬರಲಿಲ್ಲವೆಂದು ಕೇಳಿದಾಗ, ಗಾಲಿಬ್ ತನ್ನ ನಿರೀಕ್ಷೆಯನ್ನು ವಿವರಿಸಿದ. ಗಾಲಿಬ್ ಸರಕಾರೀ ಕೆಲಸದ ಮೇಲೆ ಬಂದಿದ್ದರೆ ಅಂಥ ಔಪಚಾರಿಕ ಸ್ವಾಗತ ಸಿಗಬಹುದಾಗಿತ್ತೆಂದರೂ, ಈಗ ದೆಹಲಿ ಕಾಲೇಜಿನಲ್ಲಿ ತಾನೇ ಒಂದು ಕೆಲಸ ಕೇಳಲು ಬಂದಾಗ ಅಂಥ ಸ್ವಾಗತವನ್ನು ನಿರೀಕ್ಷಿಸುವುದು ತಪ್ಪೆಂದು ಥಾಮ್‌ಸನ್ ವಿವರಿಸಿದ. ಆ ಮಾತು ಕೇಳಿ ಗಾಲಿಬ್ ಸಿಡಿಮಿಡಿಗೊಂಡ. ದೆಹಲಿ ಕಾಲೇಜಿನ ಹುದ್ದೆ ಸ್ವೀಕರಿಸುವುದರಿಂದ ಸ್ವದೇಶಿ ಬಂಧುಗಳ ಹಾಗು ಬ್ರಿಟಿಷ್ ಅಧಿಕಾರಿಗಳ ವಲಯದಲ್ಲಿ ತನ್ನ ಮರ್ಯಾದೆ ಹೆಚ್ಚೀತೆಂಬ ಭಾವನೆಯಿಂದ ತಾನು ಬಂದುದಾಗಿಯೂ ಅವರ

ದೃಷ್ಟಿಯಲ್ಲಿ ಕೆಳಸ್ತರದವನಾಗಿ ಕಾಣಲು ತಾನು ಸಿದ್ಧನಿಲ್ಲವೆಂಬುದಾಗಿಯೂ ಗಾಲಿಬ್ ಸ್ಪಷ್ಟ ಪಡಿಸಿದ. ಕಾಲೇಜಿನ ಹುದ್ದೆ ಸ್ವೀಕರಿಸುವುದರಿಂದ ತನಗೆ ಮೊದಲಿದ್ದಷ್ಟೂ ಮರ್ಯಾದೆ ದೊರೆಯದೆ ಹೋಗುವಂತಿದ್ದರೆ ಆ ಹುದ್ದೆಯೇ ತನಗೆ ಬೇಡ ಎಂದವನೇ ಸರ್ರನೇ ತನ್ನ ಪಲ್ಲಕ್ಕಿಯೇರಿ ಮನೆಗೆ ಹೊರಟು ಬಿಟ್ಟ. ಈ ಘಟನೆ ಅವನ ಸ್ವಭಾವದ ಗಟ್ಟಿಗತನವನ್ನೇ ಸಿದ್ಧಪಡಿಸುತ್ತದೆ. 1806ರಲ್ಲಿ ಅವನ ಕಕ್ಕ ತೀರಿಕೊಂಡಾಗಿನಿಂದಲೂ ಆತ ಬ್ರಿಟಿಷರಿಂದ ವರ್ಷಾಶನ ಪಡೆಯುತ್ತಿದ್ದ. ಆತ ದರಬಾರಿನಲ್ಲಿ ಉಪಸ್ಥಿತನಿದ್ದ ಸಲವೊಮ್ಮೆ ದರಬಾರಿನ ಪ್ರಮುಖ ಅಧಿಕಾರಿಯ ಬಗ್ಗೆ ಪ್ರಶಂಸಾ ಗೀತವೊಂದನ್ನು ಬರೆಯುತ್ತಲೂ ಇದ್ದ. ಒಮ್ಮೊಮ್ಮೆ ಅದನ್ನು ಸಾದರಪಡಿಸುತ್ತಲೂ ಇದ್ದ. ತನ್ನ ಪರ್ಶಿಯನ್ ಭಾಷಾಪ್ರಭುತ್ವದ ಬಗ್ಗೆ ಅವನಿಗೆ ಅಭಿಮಾನವೂ ಇತ್ತು. ಇದೆಲ್ಲದರ ಮೇಲೆ ಅವನ ಆರ್ಥಿಕ ತೊಳಲಾಟವಂತೂ ಇದ್ದೇ ಇತ್ತು. ಇಂಥ ಸನ್ನಿವೇಶದಲ್ಲಿ ಆತ ಈ ಅವಕಾಶವನ್ನು ಕಳೆದುಕೊಳ್ಳಲಿಕ್ಕಿಲ್ಲವೆಂದೇ ಎಲ್ಲರ ಊಹೆಯಾಗಿತ್ತು. ಅದರಿಂದ, ತನ್ನ ಬ್ರಿಟಿಷ್ ಪೋಷಕರಿಗೂ ಸಂತೋಷವಾಗಬಹುದಿತ್ತು; ಅಲ್ಲದೇ ತಾನೊಬ್ಬ ಪರ್ಶಿಯನ್ ವಿದ್ವಾಂಸನೆಂಬ ಸಂಗತಿಯನ್ನೂ ದೃಢೀಕರಿಸಿದಂತಾಗುತ್ತಿತ್ತು ಮತ್ತು ತನ್ನ ಆರ್ಥಿಕ ಕಷ್ಟ -ನಷ್ಟಗಳಿಂದಲೂ ಮುಕ್ತನಾಗಬಹುದಿತ್ತು. ಈ ಎಲ್ಲ ಪ್ರಯೋಜನಗಳನ್ನೂ ಕಡೆಗಣಿಸಿ ಆತ ಸಿಟ್ಟಿನ ಭರದಲ್ಲಿ ಆ ಕೆಲಸದ ಕರೆಯನ್ನು ತಿರಸ್ಕರಿಸಿ ಬಿಟ್ಟ. ಥಾಮ್‌ಸನ್ ತನ್ನನ್ನು ಮರ್ಯಾದೆಯಿಂದ ಒಳಗೆ ಬರಮಾಡಿಕೊಳ್ಳಲಿಲ್ಲ ಎಂಬ ಒಂದೇ ಕಾರಣಕ್ಕಾಗಿ ಗಾಲಿಬ್ ತನ್ನ ಬಾಗಿಲಿಗೆ ಬಂದ ಭಾಗ್ಯಲಕ್ಷ್ಮಿಯನ್ನು ಹೊರತಳ್ಳಿ ಹಾಕಿದ. ಇದು ಅವನ ಅಂತರ್ಭೂತ ಸ್ವಾಭಿಮಾನ ಮತ್ತು ಸ್ವಪ್ರತಿಷ್ಠೆಯನ್ನೇ ಸಾಬೀತುಗೊಳಿಸುತ್ತದೆ.

## ಜೂಜಾಟಕ್ಕಾಗಿ ಜೈಲು

ಸ್ವಾಭಿಮಾನ ಮತ್ತು ಸ್ವಪ್ರತಿಷ್ಠೆಯಿದ್ದುದೇನೋ ಸರಿ, ಆದರೆ ಅವುಗಳಿಂದ ಅವನ ಆರ್ಥಿಕ ಸಮಸ್ಯೆಗಳಿಗೆ ಪರಿಹಾರವೇನೂ ದೊರೆಯಲಿಲ್ಲ. ಈ ಸಮಸ್ಯೆಗಳು ದಿನೇ ದಿನೇ ಗಂಭೀರ ಸ್ಥಿತಿಗೇರುತ್ತಲೇ ನಡೆದವು. ಅವನು ತನ್ನ ಎಳೆಪ್ರಾಯದ ದಿನಗಳಿಂದಲೂ ಚದುರಂಗ ಮತ್ತು 'ಚಾಸರ್' ಆಟಗಳನ್ನು ಸಣ್ಣ - ಪುಟ್ಟ ಪಂತಗಳನ್ನು ಕಟ್ಟಿ ಆಡುತ್ತ ಬಂದಿದ್ದ. ಈಗಿನ ಅಭಾವಸ್ಥಿತಿಯಿಂದಾಗಿ ಅವನು ಈ ಜೂಜಾಟದಲ್ಲಿ ಬಲು ಗಂಭೀರವಾಗಿಯೇ ತನ್ನನ್ನು ತೊಡಗಿಸಿಕೊಳ್ಳಲಾರಂಭಿಸಿದನೆಂದು ತೋರುತ್ತದೆ. ನಗರದ ಧನಿಕನೊಬ್ಬ ಈ ಚಟುವಟಿಕೆಯಲ್ಲಿ ಭಾಗವಹಿಸಲು ನಿಯಮಿತವಾಗಿ ಅವನ ಮನೆಗೆ ಬರುತ್ತಿದ್ದ. ಇದರಿಂದ ಅವನಿಗೆ ಕೊಂಚ ಮಟ್ಟಿಗೆ ಸಹಾಯವೂ ಆಗುತ್ತಿತ್ತು. ನಗರದಲ್ಲಿ ಜೂಜಾಟದ ಹಾವಳಿ ಹೆಚ್ಚಾಗಿದೆಯೆಂದರಿತ ಪೋಲಿಸ್ ಅಧಿಕಾರಿಗಳು ಸಾಮಾಜಿಕ ಸ್ವಾಸ್ಥ್ಯವನ್ನು ಹಾಳ್ಗೆಡಿಸುತ್ತಿದ್ದ ಈ ಪಿಡುಗಿಗೆ ತಡೆ ಹಾಕುವ ಹವಣಿಕೆಯಲ್ಲಿದ್ದರು. ದಿನಾಲು ಒಂದಿಲ್ಲೊಂದು ಜೂಜಾಟದ ಕೇಂದ್ರದ ಮೇಲೆ ಮುತ್ತಿಗೆ ಹಾಕುತ್ತಿದ್ದರು, ಆಟಗಾರರನ್ನು ಬಂಧಿಸುತ್ತಿದ್ದರು; ದಂಡ ವಿಧಿಸುತ್ತಿದ್ದರು. ನಗರದ ಸಾಹಿತ್ಯ ಪ್ರೇಮಿ

ಹಾಗು ಗಾಲಿಬನ ನಿಕಟ ಸ್ನೇಹಿತ ಕೊತವಾಲ ಈವರೆಗೆ ಗಾಲಿಬನಿಗೆ ಸಂರಕ್ಷಣೆ ನೀಡುತ್ತ ಬಂದಿದ್ದ. ಆದರೆ ಇದೇ ಹೊತ್ತಿಗೆ ಅವನ ವರ್ಗವಾಯಿತು. ಹೊಸದಾಗಿ ಬಂದ ಪೋಲಿಸ್ ಇನ್‌ಸ್ಪೆಕ್ಟರ್ ಫೈಜುಲ್ ಹಸನ್ ಖಾನ್ ಬಲು ಕಟ್ಟುನಿಟ್ಟಿನ ಮನುಷ್ಯ. ಅವನಿಗೆ ಸಾಹಿತ್ಯದ ಬಗ್ಗೆ ಯಾವ ಆಸಕ್ತಿಯೂ ಇರಲಿಲ್ಲ. ಅವನಿಗೆ ತನ್ನ ಕರ್ತವ್ಯವೇ ಮುಖ್ಯ. ನಗರದಲ್ಲಿ ಜೂಜಾಟವೆಂಬುದೇ ಉಳಿಯದಂತೆ ಮಾಡಬೇಕೆಂದು ಆತ ಆಣಿಯಾದ. ಒಂದು ದಿನ ಮಹಿಳೆಯರ ವೇಷದಲ್ಲಿ ಹೋಗಿ ಗಾಲಿಬ್‌ನ ಮನೆಯ ಮೇಲೆ ಆತ ಮುತ್ತಿಗೆ ಹಾಕಿದ. ಆತ ಪಲ್ಲಕ್ಕಿಯೊಂದರಲ್ಲಿ ಕೆಲವು ಪೋಲಿಸರನ್ನು ಕುಳ್ಳಿರಿಸಿ ಯಾರೋ ಪರದಾಧಾರೀ ಸ್ತ್ರೀಯರೇ ಗಾಲಿಬನ ಭೇಟಿಗೆ ಬಂದಿರಬಹುದೆಂಬಂತೆ ಭಾಸವಾಗಲು ಪಲ್ಲಕ್ಕಿಯ ಸುತ್ತಲೂ ಪರದೆ ಇಳಿಬಿಡಿಸಿದ್ದ. ಗಾಲಿಬ್ ಮತ್ತು ಅವನ ಮಿತ್ರರು ಜೂಜಾಟದಲ್ಲಿ ಮಗ್ನರಾಗಿದ್ದರು. ಪಲ್ಲಕ್ಕಿಯಿಂದಿಳಿದ ಪೋಲಿಸರು ಅವರನ್ನೆಲ್ಲ ತಕ್ಷಣ ಕೈದು ಮಾಡಿದರು. ಆಟಗಾರರು ಪ್ರತಿಭಟಿಸಿದರೂ ಪ್ರಯೋಜನವಾಗಲಿಲ್ಲ. ಸೇರಿದ್ದ ಶ್ರೀಮಂತರೇನೋ ತಮ್ಮ ಧನಬಲದ ಪ್ರಭಾವ ಬೀರಿ ಆ ಪ್ರಸಂಗದಿಂದ ಪಾರಾದರು. ಆದರೆ ತನ್ನ ಮನೆಯಲ್ಲಿ ಜೂಜಾಟದ ಕೇಂದ್ರವನ್ನು ತೆರೆದಿದ್ದನೆಂಬ ಆಪಾದನೆಯ ಮೇಲೆ ಗಾಲಿಬನನ್ನು ಬಂಧಿಸಲಾಯಿತು. ಅವನನ್ನು ನ್ಯಾಯಾಧೀಶನ ಮುಂದೆ ಹಾಜರಪಡಿಸಲಾಯಿತು. ಕಾನೂನಿಗೆ ವ್ಯತಿರಿಕ್ತನಾಗಿ ಜೂಜಾಟದ ಕೇಂದ್ರ ನಡೆಸಿದನೆಂದು ಮೊಕದ್ದಮೆ ಹೂಡಲಾಯಿತು. ಅವನನ್ನು ಉಳಿಸಬೇಕೆಂದು ಅವನ ಸ್ನೇಹಿತರು ಶತಪ್ರಯತ್ನ ಮಾಡಿದರು. ಅವನ ಪರವಾಗಿ ದೊರೆಯೂ ಶಿಫಾರಸು ಮಾಡಿದ. ಯಾವುದೂ ಪ್ರಯೋಜನಕಾರಿಯಾಗಲಿಲ್ಲ. ಕೊನೆಗೂ ಅವನಿಗೆ ಆರು ತಿಂಗಳು ಸಶ್ರಮ ಶಿಕ್ಷೆ ಮತ್ತು 200 ರೂ. ಗಳ ದಂಡ ವಿಧಿಸಲಾಯಿತು. 50 ರೂ ಅಧಿಕ ದಂಡ ತೆತ್ತರೆ ಅವನ ಶ್ರಮದ ಕಾರ್ಯವನ್ನು ವಜಾ ಮಾಡಲಾಗುವುದೆಂದೂ, ದಂಡವನ್ನು ಕೊಡುವುದಾಗದೇ ಹೋದರೆ ಕಾರಾಗೃಹವಾಸವನ್ನು ಒಂದು ವರ್ಷಕ್ಕೆ ಹೆಚ್ಚಿಸಲಾಗುವುದೆಂದೂ ಆಜ್ಞೆಯಾಗಿತ್ತು. ಅವನು ಸೆರೆಮನೆಯಲ್ಲಿ ಪೂರ್ತಿ ಆರು ತಿಂಗಳು ಕಳೆಯದೆ, ದೆಹಲಿಯ ಸಿವಿಲ್ ಸರ್ಜನ್ ಡಾ॥ ರಾಸ್‌ನ ಶಿಫಾರಸಿನ ಮೇಲೆ ಮೂರು ತಿಂಗಳಾದೊಡನೆ ಬಿಡುಗಡೆ ಪಡೆದು ಹೊರಬಂದ.

ಈ ಕಾರಾಗೃಹವಾಸ ಅವನ ಸ್ವಾಭಿಮಾನಕ್ಕೆ ಬಲು ದೊಡ್ಡ ಆಘಾತವನ್ನುಂಟು ಮಾಡಿತು. ಅವನು ದಂಡ ತೆತ್ತುದರಿಂದ ಕಾರಾಗೃಹವಾಸದಲ್ಲಿ ಸಶ್ರಮ ಕೆಲಸವನ್ನೇನು ಮಾಡಬೇಕಿರಲಿಲ್ಲ. ಅವನ ಸಾಮಾಜಿಕ ಹಾಗು ಸಾಹಿತ್ಯಿಕ ಪ್ರತಿಷ್ಠೆಯ ಪರಿಚಯವುಳ್ಳ ಅಧಿಕಾರಿಗಳು ಅವನೊಡನೆ ಉದಾರವಾಗಿಯೇ ನಡೆದುಕೊಂಡರು. ಅವನ ಆವಶ್ಯಕತೆಗಳನ್ನೆಲ್ಲ ಮನೆಯಿಂದಲೇ ಪೂರೈಸಲಾಗುತ್ತಿತ್ತು. ಮಿತ್ರರ ಸಂದರ್ಶನಗಳ ಮೇಲೂ ಮಿತಿಯ ಬಂಧನ ಹಾಕಿರಲಿಲ್ಲ. ಏನೆಂದರೂ ಕಾರಾಗೃಹ ಕಾರಾಗೃಹವೇ. ಅಂತೆಯೇ ಒಂದು ನೈತಿಕ ಅಪರಾಧಕ್ಕಾಗಿ ಈ ಕಾರಾಗೃಹವಾಸಕ್ಕೆ ಗುರಿಯಾದ ಗಾಲಿಬನ ಪ್ರತಿಷ್ಠೆ ಸಮಾಜ ದೃಷ್ಟಿಯಲ್ಲಿ ಕಡಿಮೆಯಾದದ್ದು ಸಹಜವೇ. ಈ ದುರ್ದೈವೀ ಘಟನೆಯಿಂದ ಅವನಿಗೊಂದು ಚುರುಕು ಮುಟ್ಟಿದಂತಾಯಿತು. ಅಪರಾಧ ಯಾವುದೇ

ಇರಲಿ, ಎಂಥದೇ ಇರಲಿ, ಸಮಾಜದ ದೃಷ್ಟಿಯಲ್ಲಿ ಅಪರಾಧ ಮಾಡಿದವನು ಅಪರಾಧಿಯೇ. ಅಂತೆಯೇ ಗಾಲಿಬ್ ಈ ಸಮಾಜಿಕ ನಿಂದನೆಯಿಂದ ಬಹುಕಾಲ ಬೇಸರ ಪಟ್ಟುಕೊಂಡೇ ಇರಬೇಕಾಯಿತು. ಒಮ್ಮೆಯಂತೂ, ತನ್ನ ಭೂತವನ್ನರಿಯದ, ಈ ಅಪ್ರಿಯ ಘಟನಾವಳಿಯ ನಿಮಿತ್ತದಿಂದ ತನ್ನನ್ನು ಹಂಗಿಸದ ಇನ್ನಾವುದೋ 'ದೂರದ' ನಾಡಿಗೆ ಹೊರಟು ಹೋಗಬೇಕೆಂದೂ ಅವನಿಗೆನಿಸಿತ್ತು.

ಸೋಜಿಗದ ಮಾತೆಂದರೆ, ಅವನ ಸ್ವಾಭಿಮಾನದ ದೃಷ್ಟಿಯಿಂದ ಯಾವುದು ಹಾನಿಕರವೆನಿಸಿತೋ ಅದೇ ಸಾಹಿತ್ಯದ ದೃಷ್ಟಿಯಿಂದ ವರದಾನವಾಗಿ ಪರಿಣಮಿಸಿದ್ದು! ಅವನು ಸೆರೆಮನೆಯಲ್ಲಿದ್ದಾಗ ತನ್ನ ಅಂತರಂಗವನ್ನೇ ತೋಡಿಕೊಂಡ ರೀತಿಯಲ್ಲಿ ಪರ್ಶಿಯನ್ ಭಾಷೆಯಲ್ಲಿ ಸುದೀರ್ಘ ಕಾವ್ಯವೊಂದನ್ನು ರಚಿಸಿದ. ಅದರಲ್ಲಿ ಆತ ತನ್ನ ದುರ್ದೈವಕ್ಕಾಗಿ ಕಳವಳ ಪಡುತ್ತ ತಾನೆಷ್ಟು ಗೌರವದ ವ್ಯಕ್ತಿಯಾಗಿದ್ದರೂ ನಗರದ ಚೋರ-ಚಾಂಡಾಲರೊಡನೆ ಸೆರೆಯಲ್ಲಿದ್ದು ನರಳುವ ಸ್ಥಿತಿಗೆ ತಂದಿಟ್ಟ ತನ್ನ ದೈವ ಹಾಗು ಸಮಾಜವನ್ನು ಮನಸಾರೆ ಶಪಿಸಿದ್ದಾನೆ. ತನ್ನ ಬೆಂಗಾವಲಾಗಿ ನಿಂತ ಮಿತ್ರರನ್ನು ಅವರಲ್ಲೂ ಮುಖ್ಯವಾಗಿ ನವಾಬ್ ಮುಸ್ತಫಾ ಖಾನ್ ಶೈಫ್ತಾ ಅಂಥವರನ್ನು ಬಾಯ್ತುಂಬ ಕೊಂಡಾಡಿದ್ದಾನೆ. ಮುಸ್ತಫಾ ಸ್ವತಃ ಉರ್ದು ಹಾಗು ಪರ್ಶಿಯನ್ ಕವಿಯಾಗಿದ್ದ. ತನ್ನ ಪರ್ಶಿಯನ್ ರಚನೆಗಳ ಬಗ್ಗೆ ಆಗಾಗ ಗಾಲಿಬನೊಡನೆ ಚರ್ಚಿಸುತ್ತಿದ್ದ. ಪರ್ಶಿಯನ್ ಭಾಷೆಯಲ್ಲಿ ಅದ್ಭುತ ಪಾಂಡಿತ್ಯ ಹೊಂದಿದ್ದ ಗಾಲಿಬನ ಬಗ್ಗೆ ಅಪಾರ ಗೌರವವನ್ನಿಟ್ಟುಕೊಂಡಿದ್ದ ಮುಸ್ತಫಾ ಗಾಲಿಬ್‌ನ ಹ್ಯನ್ನನಗಳ ವಿಶೇಷ ಗುಣಗಳಿಗಾಗಿ ಅವನನ್ನು ಬಹುಪರಿಯಾಗಿ ಹೊಗಳುತ್ತಿದ್ದ. ಗಾಲಿಬನನ್ನು ಸೆರೆ ಹಿಡಿದ ಸಂಗತಿ ತಿಳಿದೊಡನೆ ತನ್ನೆಲ್ಲ ಪ್ರಭಾವವನ್ನೂ ಬಳಸಿ ಅವನನ್ನು ಬಿಡಿಸಿಕೊಳ್ಳಬೇಕೆಂದು ಮುಸ್ತಫಾ ಪ್ರಯತ್ನಿಸಿ ವಿಫಲನಾಗಿದ್ದ. ಗಾಲಿಬನ ಮೇಲೆ ಮೊಕದ್ದಮೆ ಹೂಡಿ ಅವನನ್ನು ಕಾರಾಗೃಹಕ್ಕೆ ಕಳಿಸಲಾಯಿತು. ಗಾಲಿಬನ ಮೊಕದ್ದಮೆ ನಡೆದಾಗ ಅವನಿಗೆ ಆರ್ಥಿಕ ಸಹಾಯವನ್ನು ಮುಸ್ತಫಾ ಮಾಡಿದ್ದ. ಗಾಲಿಬ್ ಸೆರೆಮನೆಯಲ್ಲಿದ್ದಷ್ಟು ಕಾಲವು ಆತ ಪ್ರತಿ ಎರಡು ದಿನಗಳಿಗೊಮ್ಮೆ ಅವನ ಸಂದರ್ಶನಕ್ಕೆ ಹೋಗಿ, ಸೆರೆಮನೆ ವಾಸದಿಂದುಂಟಾದ ಅವನ ಕಳವಳವನ್ನು ಕಡಿಮೆಗೊಳಿಸುವ ದೃಷ್ಟಿಯಿಂದ ಸಾಧ್ಯವಿದ್ದಷ್ಟೂ ಹೆಚ್ಚು ಹೊತ್ತು ಅವನೊಡನಿರುತ್ತಿದ್ದ. ತನ್ನ ಕಷ್ಟದ ಕಾಲದಲ್ಲಿ ಅತ್ಯಂತ ಪ್ರಾಮಾಣಿಕತನ ಹಾಗು ಧೈರ್ಯದಿಂದ ತನ್ನ ನೆರವಿಗೆ ಬಂದ ಶೈಫ್ತಾನನ್ನು ಕುರಿತು ಗಾಲಿಬ್ ಪ್ರಶಂಸೆಯ ಹೊಳೆಯನ್ನೇ ಹರಿಸಿದ್ದಾನೆ.

## ರಾಜವಂಶದ ಇತಿಹಾಸಕಾರ

ಸೆರೆಮನೆಯಿಂದ ಹೊರಬಂದ ಬಳಿಕ ಆತ ದೊರೆ ಎರಡನೇ ಬಹಾದ್ದುರ್ ಶಹನ ಧಾರ್ಮಿಕ ಹಾಗು ಆಧ್ಯಾತ್ಮಿಕ ಗುರುಗಳಾದ ಮೌಲಾನಾ ನಾಸೀರುದ್ದೀನ್ ಉರ್ಫ್ ಮಿಂಯಾ ಕಾಲೇ ಸಾಹೇಬರಲ್ಲಿ ಕೆಲ ದಿನ ಕಳೆದ. ಅವನೆಲ್ಲ ಗೆಳೆಯರಿಗೂ ಅವನ ಆರ್ಥಿಕ ದುಃಸ್ಥಿತಿಯ ಅರಿವಿದ್ದೇ ಇತ್ತು. ಅವನನ್ನು ಈ ಗೋಳಿನಿಂದ ಮುಕ್ತಗೊಳಿಸುವ

ದೃಷ್ಟಿಯಿಂದ ಯಾವುದಾದರೊಂದು ಖಾಯಂ ಸ್ವರೂಪದ ಆದಾಯದ ವ್ಯವಸ್ಥೆ ಮಾಡುವುದು ಅತ್ಯಗತ್ಯವಾಗಿತ್ತು. ಬಹಾದ್ದುರ್ ಶಹನ ಮಂತ್ರಿ ಹಾಗು ರಾಜವೈದ್ಯನಾಗಿದ್ದ ಅಹಸಾನುಲ್ಲಾ ಖಾನ್ ಬಲು ದೊಡ್ಡ ಸಾಹಿತ್ಯಾಭಿಮಾನಿಯಾಗಿದ್ದನಲ್ಲದೆ, ಗಾಲಿಬನ ನಿಕಟ ಮಿತ್ರನೂ ಆಗಿದ್ದ. ಅವನೂ ನಾಸೀರುದ್ದೀನನೂ ಸೇರಿ ಮಾತಾಡಿಕೊಂಡು ಬಹಾದ್ದುರ್ ಶಹನಿಗೆ ಗಾಲಿಬನ ಪರವಾಗಿ ಶಿಫಾರಸು ಮಾಡಬೇಕೆಂದು ನಿರ್ಧರಿಸಿದರು. ತತ್ ಪರಿಣಾಮವಾಗಿ, ದೊರೆ 1850ರ ಜುಲೈ ತಿಂಗಳಲ್ಲಿ ಗಾಲಿಬನನ್ನು ಕರೆಯಿಸಿ ಪರ್ಶಿಯನ್ ಭಾಷೆಯಲ್ಲಿ ರಾಜವಂಶದ ಇತಿಹಾಸವನ್ನು ಬರೆಯಬೇಕೆಂದೂ ಅದಕ್ಕಾಗಿ ಅವನಿಗೆ ವರ್ಷಕ್ಕೆ ಆರು ನೂರು ರೂ.ಗಳ ಸಂಭಾವನೆ ನೀಡಲಾಗುವುದೆಂದೂ ಅಪ್ಪಣೆ ಕೊಡಿಸಿದನು. ಅದಲ್ಲದೆ ದೊರೆಯು ಗಾಲಿಬನಿಗೆ ರಾಜಪೋಷಾಕು ಹಾಗು ನಜಮುದ್ದೌಲಾ, ದಬೀರುಲ್ಮುಲ್ಕ್, ನಿಜಾಮಜಂಗ್ - ಎಂಬ ಗೌರವ ಪದವನ್ನು ನೀಡಿದ್ದ. ಹೀಗೆ ಗಾಲಿಬ್ ಒಂದು ನಿರ್ದಿಷ್ಟ ಕಾರ್ಯಕ್ಕಾಗಿ ನಿರ್ದಿಷ್ಟ ವೇತನದ ಮೇಲೆ ಮೊಗಲ್ ದರಬಾರದ ಸಿಬ್ಬಂದಿಯಲ್ಲಿ ಸೇರಿಕೊಂಡ. ಅಹಸಾನುಲ್ಲಾ ಖಾನ್ ಐತಿಹಾಸಿಕ ಸ್ವರೂಪದ ಮೂಲ ಸಾಮಗ್ರಿಯನ್ನು ಸಂಗ್ರಹಿಸಿ ಗಾಲಿಬನಿಗೆ ಪೂರೈಸುತ್ತಿರಬೇಕೆಂದೂ, ಅದನ್ನು ಆತ ಯೋಗ್ಯ ರೀತಿಯಲ್ಲಿ ಪರ್ಶಿಯನ್ ಭಾಷೆಯಲ್ಲಿ ಬರೆದು ತೆಗೆಯಬೇಕೆಂದೂ ನಿರ್ದೇಶಿಸಲಾಗಿತ್ತು. ಈ ಕೆಲಸ 1857ರವರೆಗೆ - ಅಂದರೆ 'ಸಿಪಾಯರ ಬಂಡು' ನಡೆಯುವವರೆಗೆ - ಮುಂದುವರಿದಿತ್ತು. ಈ ಇತಿಹಾಸವನ್ನು ತೈಮೂರ್‌ನಿಂದ ಹುಮಾಯೂನನವರೆಗೆ ಮತ್ತು ಅಕಬರನಿಂದ ದ್ವಿತೀಯ ಬಹಾದ್ದುರ್ ಶಹನವರೆಗೆ ಎರಡು ಭಾಗಗಳಲ್ಲಿ ಪೂರ್ತಿಗೊಳಿಸಬೇಕೆಂಬುದು ಗಾಲಿಬ್‌ನ ಯೋಜನೆಯಾಗಿತ್ತು. ಆದರೆ ಮೂಲ ಸಾಮಗ್ರಿಯನ್ನು ಸಂಗ್ರಹಿಸಿ ಪರ್ಶಿಯನ್ ಭಾಷಾಂತರಕ್ಕಾಗಿ ಗಾಲಿಬನಿಗೆ ಪೂರೈಸುವ ಹೊರೆ ಹೊತ್ತ ಅಹಸಾನುಲ್ಲಾ ಖಾನ್‌ನಿಗೆ ತನ್ನ ಹಲವೊಂದು ಚಟುವಟಿಕೆಗಳ ನಡುವೆ ಈ ಕೆಲಸವನ್ನು ನಿಯಮಿತವಾಗಿ ಮಾಡುವುದಾಗಲಿಲ್ಲ. ಹೀಗಾಗಿ ಮೊದಲ ಭಾಗದ ಬರವಣಿಗೆಯ ಕೆಲಸವೇ ಕುಂಟುತ್ತ ಕೂರುತ್ತ ಹಲವೊಂದು ವರ್ಷಗಳ ಕೊನೆಗೊಮ್ಮೆ ಹೇಗೋ ಪೂರ್ಣಗೊಂಡಿತು. ಎರಡನೆಯ ಭಾಗದ ಹೊತ್ತಗೆಗಾಗಿ ಬರಬೇಕಾಗಿದ್ದ ಮೂಲ ಸಾಮಗ್ರಿಯಂತೂ ಬರಲೇ ಇಲ್ಲ. ಈ ಕೆಲಸದ ಬಗ್ಗೆ ಯಾರಲ್ಲಿಯೂ ವಿಶೇಷ ಆಸಕ್ತಿಯೂ ಉಳಿದಿರಲಿಲ್ಲ. ಗಾಲಿಬನ ಕ್ರಿಯಾಸಕ್ತಿಯೂ ಕಡಿಮೆಯಾಗಿ, ಮೂಲ ಸಾಮಗ್ರಿಗಾಗಿ ಆತ ಅಹಸಾನುಲ್ಲಾ ಖಾನನಿಗೆ ಒತ್ತಾಯ ಮಾಡಲೂ ಇಲ್ಲ. ಒಟ್ಟಿನ ಮೇಲೆ ಎರಡನೆಯ ಗ್ರಂಥ ಸಿದ್ಧಗೊಳ್ಳಲೇ ಇಲ್ಲ. ಮೊದಲನೆಯ ಗ್ರಂಥ ಮಿಹ್ರ್-ಇ-ನಿಮ್ರುಜ್ ಶೀರ್ಷಿಕೆಯೊಡನೆ 1854ರಲ್ಲಿ ಕೆಂಪು ಕೋಟೆಯಲ್ಲಿದ್ದ ದರಬಾರೀ ಮುದ್ರಣಾಲಯದಿಂದ ಪ್ರಕಟಗೊಂಡಿತು.

ಅದಾದನಂತರದ ಕೆಲ ದಿನಗಳು ಅವನಿಗೆ ಸುಖ-ಸಂತೃಪ್ತಿಯ ದಿನಗಳೆನಿಸಿದವು. ದೊರೆಯ ಸಾಹಿತ್ಯಿಕ ಸಲಹೆಗಾರನಾಗಿದ್ದ ಮೊಹಮ್ಮದ್ ಇಬ್ರಾಹಿಮ್ ಜೌಕ್ 1854ರ ನವೆಂಬರ್ ತಿಂಗಳಿನಲ್ಲಿ ತೀರಿಕೊಂಡ. ಆನಂತರ ದೊರೆ ಗಾಲಿಬನಿಂದ ಸಲಹೆ ಪಡೆಯಲಾರಂಭಿಸಿದ. ಎರಡನೇ ಬಹಾದ್ದುರ್ ಶಹನ ವಾರಸುದಾರ ಮಿರ್ಜಾ

ಫಖಿರುದ್ದೀನನೂ ಗಾಲಿಬನ ಸಲಹೆ ಪಡೆಯುತ್ತ ಆ ಸೇವೆಗಾಗಿ ಕವಿಗೆ ವರ್ಷಕ್ಕೆ ನಾನೂರು ರೂಪಾಯಿ ಸಂಭಾವನೆಯನ್ನು ನಿಗದಿಗೊಳಿಸಿದ. ಅದರಂತೆಯೇ ಔಧ್‌ನ ಕೊನೆಯರಸ ವಾಜಿರ್ ಅಲಿ ಶಹನು ಕವಿಗೆ ವಾರ್ಷಿಕ ಅನುದಾನ ನೀಡಿ ಪುರಸ್ಕರಿಸಿದ. ಸ್ವಾಭಾವಿಕವಾಗಿ, ಈ ಸಂಭಾವನೆಗಳೆಲ್ಲ ಮೊದಲಿಗಿಂತ ಕೊಂಚವಾದರೂ ನೆಮ್ಮದಿ ಹಾಗು ನಿಶ್ಚಿಂತೆಯಿಂದ ಬದುಕಲು ಗಾಲಿಬನಿಗೆ ಸಹಾಯಕವಾಗಿರಲು ಸಾಕು.

# ಬಂಡು

ದುರ್ದೈವದಿಂದ ಪರಿಸ್ಥಿತಿ ಮತ್ತೆ ಬಲು ಬೇಗ ಬಿಗಡಾಯಿಸಿತು. 1857 ರ ಮೇ ತಿಂಗಳಲ್ಲಿ ಭಾರತದ ಇತಿಹಾಸದಲ್ಲೊಂದು ದೊಡ್ಡ ಘಟನೆ ಸಂಭವಿಸಿತು. ಅದುವೇ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪ್ರಪ್ರಥಮ ಹೆಜ್ಜೆಯೆಂದು ಭಾರತೀಯರೂ, ತಮ್ಮ ವಿರುದ್ಧ ಸಿಡಿದೆದ್ದ ಸಿಪಾಯರ ಬಂಡೆಂದು ಆಂಗ್ಲರೂ ಭಾವಿಸಿದ ಚಾರಿತ್ರಿಕ ಘಟನೆ. ಇದರಿಂದಾಗಿ, ಭಾರತದಿಂದ ತೈಮೂರನ ವಂಶವೇ ನಾಮಶೇಷವಾದಂತಾಯಿತು; ಭಾರತವು ಪರಕೀಯರ ಕೈವಶವಾಯಿತು. ಈ ಬದಲಾವಣೆಯ ಬಿಸಿ ಗಾಳಿಬನನ್ನು ತಟ್ಟದೇ ಬಿಡಲಿಲ್ಲ.

ಈ 'ದಂಗೆ' ಯೆಂದರೆ, ಆಂಗ್ಲರು ಮೊದಮೊದಲು ವ್ಯಾಪಾರಕ್ಕೆಂದು ಭಾರತಕ್ಕೆ ಬಂದು, ಕ್ರಮೇಣ ಆಡಳಿತವನ್ನೇ ಕೈಗೆತ್ತಿಕೊಂಡು ನಡೆಸಿದ ರಾಜಕೀಯ ಅನ್ಯಾಯ ಹಾಗು ಅತಿರೇಕಗಳ ವಿರುದ್ಧ ಪ್ರತಿಭಟನೆಯ ಉಗ್ರ ಕ್ರಮವೇ ಆಗಿತ್ತು. 17ನೆಯ ಶತಕದಾರಂಭ ಕಾಲದಲ್ಲಿ ಯುರೋಪಿನ ಇತರ ದೇಶವಾಸಿಗಳೊಡನೆ ಬ್ರಿಟಿಷರು ವ್ಯಾಪಾರಿಗಳೆಂದು ಭಾರತಕ್ಕೆ ಬಂದರು. ಈ ಉದ್ದೇಶಕ್ಕಾಗಿ ಇಂಗ್ಲಂಡಿನಲ್ಲೊಂದು ರಾಜಶಾಸನದನ್ವಯ ಈಸ್ಟ್ ಇಂಡಿಯಾ ಕಂಪೆನಿ ಸ್ಥಾಪಿಸಿದ್ದರು. ಮೊಗಲರ ಆಳಿಕೆ - ಮೊದಲು ಆಗ್ರಾದಲ್ಲಿ, ನಂತರ ದೆಹಲಿಯಲ್ಲಿ - ಪರಿಣಾಮಕಾರಿಯಾಗಿರುವವರೆಗೆ ಬ್ರಿಟಿಷರು ತಮ್ಮ ವ್ಯಾಪಾರೋದ್ದಿಮೆಯ ಮೇಲೆಯೇ ಗಮನವನ್ನು ಕೇಂದ್ರೀಕರಿಸಿದರು. 1707 ರಲ್ಲಿ ಔರಂಗಜೇಬನ ಮರಣ ಸಂಭವಿಸಿದ ಬಳಿಕ ದೂರ ದೂರದ ಪ್ರಾಂತಗಳ ಮೇಲೆ ದೆಹಲಿ ಆಡಳಿತದ ಹಿಡಿತ ಸಡಿಲಗೊಂಡು ಅಶಾಂತಿ ಹೆಚ್ಚಿ ಆಂತರಿಕ ಸಂಘರ್ಷಗಳು ಆರಂಭಗೊಂಡವು. ಹೀಗೆ, ಕೊಳದ ನೀರು ಕಲಕಿದಾಗಲೇ ಇಂಗ್ಲೆಂಡ್ ಮತ್ತು ಫ್ರಾನ್ಸಿನ ಎರಡು ವ್ಯಾಪಾರೀ ಸಂಸ್ಥೆಗಳು ಇದೇ ಸುಸಂಧಿಯೆಂದು ಭಾವಿಸಿ ಭಾರತದ ಆಂತರಿಕ ರಾಜಕೀಯದಲ್ಲಿ ಗಾಳವೆಸೆಯಲಾರಂಭಿಸಿದವು. ಅವರು ಸಶಸ್ತ್ರ ಸೈನಿಕರನ್ನಿಟ್ಟು ಸಂಬಳ ಕೊಡಲಾರಂಭಿಸಿದರು; ತಮ್ಮ ಗಿರಣಿ - ಕಾರ್ಖಾನೆಗಳಿದ್ದ ಪಟ್ಟಣಗಳನ್ನು ಬಲಪಡಿಸತೊಡಗಿದರು. ಬೇರೆ ಬೇರೆ ಸಂಸ್ಥಾನಗಳಲ್ಲಿ ತಮ್ಮ ಕಣ್ಣಂಜಿಕೆಯಲ್ಲಿರುವವರೇ ಅಧಿಕಾರಕ್ಕೆ ಬರುವಂತೆ ಸ್ಥಾನಿಕ ತಂಟೆ - ತಕರಾರುಗಳಲ್ಲಿ ಒಂದೊಂದೇ ಪಕ್ಷ ವಹಿಸಲಾರಂಭಿಸಿದರು. ಬರುಬರುತ್ತ ಈ ದೇಶದ ಮೇಲೆ ಮೊದಲ ಹಿಡಿತ ಸಾಧಿಸುವ ದೃಷ್ಟಿಯಿಂದ ಇಂಗ್ಲೆಂಡ್ ಹಾಗು ಫ್ರಾನ್ಸ್‌ಗಳ ನಡುವೆಯೊಂದು ತರದ ಸ್ಪರ್ಧೆಯೇ ಆರಂಭವಾದಂತಾಯ್ತು.

ಭಾರತದಲ್ಲಿ ಬಹುಕಾಲ ನೆಲಸಿದ್ದ ಶಾಂತಿ - ಸಮೃದ್ಧಿಗಳ ಒಡಲಿನೊಳಗಿಂದಲೇ ಆಡಳಿತ ಹಾಗು ಸಾಮಾಜಿಕ ವ್ಯವಸ್ಥೆಯ ಅವನತಿಯ ಲಕ್ಷಣಗಳು ಕಾಣಿಸತೊಡಗಿದವು. ಚದುರಂಗದಾಟದ ಮನೆಗಳಂತೆ ಸಂಸ್ಥಾನಗಳು ನೆಲಕ್ಕುರುಳುವ ಹಾಗು ನೋಡು - ನೋಡುವಷ್ಟರಲ್ಲಿ ಹೊಸ ಸಂಸ್ಥಾನಗಳು ಎದ್ದು ನಿಲ್ಲುವ ಪ್ರಕ್ರಿಯೆಯೊಂದು ನಡೆದಾಗ ಈ ನೆಲವೊಂದು ಫಲವತ್ತಾದ ಭೂಮಿಯೆಂದು ಯಾವ ಮಹಾತ್ವಾಕಾಂಕ್ಷಿಗನಿಸುವುದೂ ಸ್ವಾಭಾವಿಕವಾಗಿತ್ತು. ಅನೇಕ ವರ್ಷಗಳಿಂದ ಬ್ರಿಟಿಷರೂ ಫ್ರೆಂಚರೂ ಭಾರತದ ಮೇಲೆ ತಮ್ಮ ಹತೋಟಿ ಸಾಧಿಸಬೇಕೆಂದು ಪೈಪೋಟಿಯನ್ನೇ ನಡೆಸಿದ್ದರು. ಈ ಸ್ಪರ್ಧೆಯಲ್ಲಿ ಬ್ರಿಟಿಷ್‌ರು ಸುದೈವಿಗಳೆನಿಸಿದರು; ಬಹುಭಾಗದ ಮೇಲೆ ತಮ್ಮ ಬಲವಾದ ಹಿಡಿತ ಸಾಧಿಸಿದರು. ಫ್ರೆಂಚ್‌ರು ಕ್ರಮೇಣ ಹಿಂದೆಹಿಂದಕ್ಕೆ ಸರಿದು ಬ್ರಿಟಿಷರಿಗೇ ದಾರಿ ಬಿಟ್ಟು ಕೊಟ್ಟರು. ಭಾರತದ ವಿಶಾಲವಾದ ಪ್ರದೇಶಗಳನ್ನು ತಮ್ಮ ಸತ್ತೆಯ ಅಥವಾ ತಮ್ಮ ಕಣ್ಣಂಜಿಕೆಯಲ್ಲಿರುವ ಪ್ರತಿನಿಧಿಗಳ ಮೂಲಕ ವಶಪಡಿಸಿಕೊಂಡ ಬ್ರಿಟಿಷರು ಕ್ರಮಕ್ರಮೇಣ ಇಡಿಯ ದೇಶವನ್ನೇ ತಮ್ಮ ಹತೋಟಿಯಲ್ಲಿ ತಂದುಕೊಳ್ಳಬೇಕೆಂದು ಶತಪ್ರಯತ್ನ ನಡೆಸಿದರು. ಆದರಿಂದಾಗಿ ಬ್ರಿಟಿಷರಿಂದ ಪದಚ್ಯುತರಾಗಿಯೂ, ಅವಮಾನಿತರಾಗಿಯೂ ಒಳಗೊಳಗೇ ಕುದಿಯುತ್ತಿದ್ದ ಭಾರತೀಯ ರಾಜ-ಮಹಾರಾಜರು ತಮ್ಮ ಹೊಸ ಯಜಮಾನರ ಬಗ್ಗೆ ಸಿಡಿಮಿಡಿಗೊಳ್ಳುತ್ತಲೇ ಇದ್ದರು. ಬೂದಿ ಮುಚ್ಚಿದ ಕೆಂಡದಂತಿದ್ದ ಈ ಕೋಪ ಸಂಘಟಿತ ಸ್ವರೂಪದ ವಿರೋಧವಿಲ್ಲದೆ ಸಿಡಿಯುವಂತಿರಲಿಲ್ಲ. ಒಂದು ಸುಸಂದರ್ಭಕ್ಕಾಗಿ ಅದು 'ಕಾಯ್ದು' ನಿಂತಿತ್ತು. ಬ್ರಿಟಿಷರು ಭಾರತೀಯ ಸೈನಿಕರ ಕೋವಿಗಳಿಗೊಂದು ಹೊಸ ಮದ್ದಿನ ತೋಟೆಯನ್ನು ಪೂರೈಸಬೇಕೆಂದು ಮಾಡಿದ ಆಕಸ್ಮಿಕ ನಿರ್ಧಾರದಿಂದಾಗಿ ಆ ಅವಕಾಶದ ಗಳಿಗೆ ಕೂಡಿ ಬಂದಂತಾಯಿತು. ಗುಂಡು ಹಾರಿಸುವ ಮೊದಲು ಆ ತೋಟೆಯನ್ನು ಹಲ್ಲುಗಳಿಂದ ಕಿತ್ತು ತೆಗೆಯಬೇಕಾಗುತ್ತಿತ್ತು. ಈ ತೋಟೆಯ ತಯಾರಿಕೆಯಲ್ಲಿ ಹಂದಿಯ ಹಾಗು ಆಕಳ ಕೊಬ್ಬು ಬೆರೆಸಿದ್ದು ಇದು ಭಾರತದ ಹಿಂದು - ಮುಸ್ಲಿಮ್‌ರಿಬ್ಬರ ಧರ್ಮವನ್ನು ಹಾಳ್ಗೆಡಿಸಲು ಬ್ರಿಟಿಷ್‌ರು ಹೂಡಿದ ಹಂಚಿಕೆಯೆಂಬ ವದಂತಿ ಕಾಳ್ಗಿಚ್ಚಿನಂತೆ ಹರಡಿತು.

ಬ್ರಿಟಿಷರು ಭಾರತಕ್ಕೆ ಬಂದಾಗಿನಿಂದಲೂ ಸ್ಥಾನಿಕ ಜನರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸುವ ಅವರ ನೀತಿ ಜಗಜ್ಜಾಹೀರಾಗಿತ್ತು. 1833 ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ನಿಯಮಾವಳಿಯಲ್ಲಿ ತಿದ್ದುಪಡಿ ಮಾಡುವುದಕ್ಕೆ ಅದೂ ಒಂದು ಕಾರಣವಾಗಿತ್ತು. ಬ್ರಿಟಿಷ್ ಶಾಸನದ ಪರವಾಗಿ ದೇಶದ ವಿವಿಧ ಭಾಗಗಳಲ್ಲಿ ಶಾಲೆ - ಕಾಲೇಜುಗಳನ್ನು ಆರಂಭಿಸಿ ಅವುಗಳ ಶಿಕ್ಷಣಕ್ರಮದಲ್ಲಿ ಕ್ರಿಶ್ಚಿಯನ್ ತತ್ವಗಳನ್ನು ಸಮಾವೇಶಗೊಳಿಸಲಾಗಿತ್ತು. ದೆಹಲಿಯಲ್ಲಿಯೇ, ಹಳೆಯ ದೆಹಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ಮಾಸ್ತರ್ ರಾಮಚಂದ್ರ ಮತ್ತು ಡಾ॥ ಚಮನ್‌ಲಾಲರಂಥ ಮಹತ್ವದ ವ್ಯಕ್ತಿಗಳೂ ಸೇರಿದಂತೆ ಹಲವೊಂದು ವಿದ್ಯಾರ್ಥಿಗಳು ಬಹಿರಂಗವಾಗಿ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದ್ದರು. ಈ ಘಟನೆಯಿಂದಾಗಿ, ಮೊದಲೇ ಬ್ರಿಟಿಷರ ಉದ್ದೇಶ ಮತ್ತು ಉಪಕ್ರಮಗಳ ಬಗ್ಗೆ ಅನುಮಾನ ಪಡುತ್ತಲೇ ಇದ್ದ ಭಾರತೀಯ ಜನತೆಗೆ, ಈ

ಪಾಶ್ಚಿಮಾತ್ಯ ಶಾಸಕರು ಭಾರತದ ಯುವಕರನ್ನು ತಲೆತಲಾಂತರಗಳಿಂದ ನಡೆದು ಬಂದ ಶ್ರದ್ಧಾಭಾವದಿಂದ ಭ್ರಷ್ಟಗೊಳಿಸುವ ಬಗ್ಗೆ ಖಾತರಿಯಾಯಿತು. ಇಂಥ ಸಂದೇಹದ ವಾತಾವರಣದಲ್ಲಿ ಮದ್ದಿನ ತೋಟೆಯ ಸುದ್ದಿಯೂ ಸೇರಿಕೊಂಡಿತು; ಭಾರತೀಯ ಸೈನಿಕರಲ್ಲಿ ಅಸಂತುಷ್ಟಿಯ ಕಿಚ್ಚು ಭುಗಿಲೆದ್ದಿತು.

1857 ರ ಮೇ 10 ರಂದು ಮೀರತ್‌ನಲ್ಲಿ ಸೈನಿಕರ ಕವಾಯಿತು ನಡೆದಾಗ ಮೊದಲ ಕಿಡಿ ಸಿಡಿಯಿತು. ಅಲ್ಲಿಯ ಕಾಲ್ದಳ ಬ್ರಿಟಿಷ್ ಸೈನ್ಯಾಧಿಕಾರಿಯ ಆಜ್ಞೆ ಪಾಲಿಸಲು ನಿರಾಕರಿಸಿ ದಂಗೆಯೆದ್ದಿತು. ಅವರು ತಮ್ಮ ಅಧಿಕಾರಿಗಳನ್ನು ಕೊಂದು, ಸೆರೆಮನೆಯ ಬಾಗಿಲು ಮುರಿದು ಆಜ್ಞಾಪಾಲನೆಯ ಉಲ್ಲಂಘನೆಗಾಗಿ ಈ ಹಿಂದೆ ಬಂಧಿಸಲ್ಪಟ್ಟಿದ್ದ ತಮ್ಮ ಸಂಗಾತಿಗಳನ್ನು ಬಿಡುಗಡೆಗೊಳಿಸಿದರು. ಅವರಲ್ಲಿ ಅನೇಕರು ಅದೇ ದಿನ ಸಾಯಂಕಾಲ ದೆಹಲಿಗೆ ಹೊರಟು ಮರುದಿನ ಅಂದರೆ 1857 ರ ಮೇ 11 ರಂದು ಅಲ್ಲಿಗೆ ತಲುಪಿದರು. ಈಗ ಬಹಾದ್ದುರ್ ಶಹ ಮುಂಬಂದು ಭಾರತೀಯ ಸೈನ್ಯದ ಅಧಿಕಾರವನ್ನು ವಹಿಸಿಕೊಂಡು ತಾನೇ ಭಾರತದ ಸಾಮ್ರಾಟನೆಂದು ಘೋಷಿಸಬೇಕೆಂದು ಬಿನ್ನವಿಸಿಕೊಂಡರು. ಆಗಲೇ 82 ತುಂಬಿದ ಬಹಾದ್ದುರ್ ಶಹ ಅವರ ಬಿನ್ನಹವನ್ನು ಮನ್ನಿಸುವ ಸ್ಥಿತಿಯೊಳಗಿರಲಿಲ್ಲ. ಆದರೆ ಪರಿಸ್ಥಿತಿಯ ಒತ್ತಡದಿಂದ ಪಾರಾಗುವ ಹಾಗೂ ಇರಲಿಲ್ಲ. ಏತನ್ಮಧ್ಯೆ ಬಂಡಾಯದ ಗಾಳಿ ಬೇರೆ ಬೇರೆ ಪಟ್ಟಣಗಳಿಗೂ ಬೀಸಿತ್ತು. ಬಂಡಾಯಗಾರರ ಮುಖಂಡರು ಕ್ರಮೇಣ ರಾಜಧಾನಿಯಲ್ಲಿ ಬಂದು ಸೇರಿ ತಾತ್ಕಾಲಿಕ ಸರಕಾರ ರಚಿಸಿ ಬಹಾದ್ದುರ್ ಶಹನೇ ಅದರ ನಾಮ ಮಾತ್ರ ಪ್ರಮುಖನೆಂದು ಉದ್ಘೋಷಿಸಿದರು. ದೆಹಲಿಯಲ್ಲಿದ್ದ ಬ್ರಿಟಿಷ್ ಅಧಿಕಾರಿ ಹಾಗು ನಾಗರಿಕರಲ್ಲಿ ಅನೇಕರು ಕೊಲ್ಲಲ್ಪಟ್ಟರು; ಉಳಿದವರು ಕಾಲಿಗೆ ಬುದ್ಧಿ ಹೇಳಿ ಬೇರೆ ಎಲ್ಲೆಲ್ಲೋ ಆಸರೆ ಪಡೆದರು. ಹೀಗೆ, ಐದು ತಿಂಗಳಿಗಿಂತ ಹೆಚ್ಚಿಗೆ ದೆಹಲಿ ಭಾರತೀಯ ಸೈನಿಕರ ವಶದೊಳಗಿತ್ತು. ಬ್ರಿಟಿಷರು ಯೋಗ್ಯ ಅವಕಾಶಕ್ಕಾಗಿ ಕಾಯ್ದು ಕುಳಿತರು. ಅವಿಚಲ ಪರಿಶ್ರಮ ಹಾಗು ಸುದೈವದಿಂದಾಗಿ ಅವರು ದೇಶದ ವಿವಿಧ ಭಾಗಗಳಲ್ಲಿ ಕಂಡು ಬಂದ ಬಂಡಾಯ ಪ್ರವೃತ್ತಿಯನ್ನು ಹತ್ತಿಕ್ಕಿದರಲ್ಲದೆ, ಮತ್ತೆ ದೆಹಲಿಯನ್ನು ತಮ್ಮ ಕೈವಶ ಮಾಡಿಕೊಂಡರು. 1857 ರ ಸಪ್ಟೆಂಬರ್ 19 ರಂದು ಬ್ರಿಟಿಷರು ಮತ್ತೆ ದೆಹಲಿಯ ಅಧಿಕಾರಸೂತ್ರ ವಹಿಸಿಕೊಂಡರು.

ಅದಾದ ಬಳಿಕ, ಸೇಡಿನ ಭಾವವೊಂದು ಹೆಡೆಯಾಡಿಸಿತು. ಸಾವಿರಾರು ನಾಗರಿಕರ ಮೇಲೆ ತ್ವರಿತ ಗತಿಯ ಮೊಕದ್ದಮೆಗಳನ್ನು ನಡೆಸಿ ಗಲ್ಲಿಗೇರಿಸಲಾಯಿತು; ಕೆಲವರ ಆಸ್ತಿಪಾಸ್ತಿಗಳನ್ನು ಜಪ್ತುಗೊಳಿಸಲಾಯಿತು; ಇನ್ನಿತರರಿಗೆ ಉಗ್ರಶಿಕ್ಷೆಯ ಬದಲಾಗಿ ಅಧಿಕ ದಂಡವನ್ನು ವಿಧಿಸಲಾಯಿತು. ಬಹಳಷ್ಟು ಜನ ರಾಜಧಾನಿಯನ್ನೇ ಬಿಟ್ಟು, ಮತ್ತೆ ಮನೆಗಳಿಗೆ ಮರಳಿ ಬರುವಷ್ಟು ಸುರಕ್ಷಿತ ವಾತಾವರಣ ನಿರ್ಮಾಣಗೊಳ್ಳುವವರೆಗೂ ಇತರ ಪಟ್ಟಣಗಳಲ್ಲಿ ಅಜ್ಞಾತವಾಸದಲ್ಲೇ ಉಳಿದುಕೊಂಡರು.

ಈ ಬಂಡಾಯದ ಸಮಯದಲ್ಲಿ ಗಾಲಿಬ್ ಮಾತ್ರ ದೆಹಲಿ ಬಿಟ್ಟು ಕದಲಲಿಲ್ಲ. ನಿಜವೆಂದರೆ, ಎಲ್ಲಿಯಾದರೂ ಹೋಗಬೇಕೆಂದರೂ ಅವನಿಗೆ ಸ್ಥಳವೇ ಇರಲಿಲ್ಲ. ಅವನ ಮಟ್ಟಿಗೆ ಬಲು ಕಠಿಣ ಕಾಲವೇ ಅದಾಗಿತ್ತು. ಬಹುದಿನಗಳಿಂದ ಎರಡು ಆದಾಯ

ಮೂಲಗಳ ನೆರವಿನೊಡನೆ ಆತ ಜೀವಿಸಿಕೊಂಡಿದ್ದ : ಮೊದಲನೆಯದೆಂದರೆ ಬ್ರಿಟಿಷ್ ಬೊಕ್ಕಸದಿಂದ ಅವನಿಗೆ ದೊರೆಯುತ್ತಿದ್ದ 750 ರೂಪಾಯಿಗಳ ವರ್ಷಾಶನ; ಎರಡನೆಯದು - ರಾಜಮನೆತನದ ಇತಿಹಾಸ ಬರೆಯುವುದಕ್ಕೆ ಬಹಾದ್ದುರ್ ಶಹನಿಂದ ದೊರೆಯುತ್ತಿದ್ದ 600 ರೂಪಾಯಿಗಳ ವಾರ್ಷಿಕ ಸಂಭಾವನೆ. ಬಂಡಾಯಗಾರರು ದೆಹಲಿಯಲ್ಲಿ ಪ್ರವೇಶಿಸಿ ಬ್ರಿಟಿಷರಿಂದ ಅಧಿಕಾರ ಸೂತ್ರವನ್ನು ಕಿತ್ತುಕೊಂಡ ಪರಿಣಾಮವಾಗಿ ಗಾಲಿಬನ ಆದಾಯದ ಈ ಎರಡೂ ಮೂಲಗಳು ಬತ್ತಿ ಹೋದವು. ಬ್ರಿಟಿಷರ ಕೈಯಿಂದ ಅಧಿಕಾರವೇ ಹೊರಟು ಹೋಗಿದ್ದ ಕಾರಣ ಅವರು ಗಾಲಿಬನಿಗೆ ಕೊಡುತ್ತ ಬಂದಿದ್ದ ವರ್ಷಾಶನ ನಿಲ್ಲಿಸಿ ಬಿಟ್ಟರು. ಬಹಾದ್ದುರ್ ಶಹನೂ ಅತಂತ್ರ ಸ್ಥಿತಿಗಿಳಿದುದಲ್ಲದೆ, ತನ್ನ ಸ್ವಂತದ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲಾಗದಷ್ಟು ಅಸಹಾಯಕನಾದ್ದರಿಂದ ಅವನು ಗಾಲಿಬನಿಗೆ ಸಂಭಾವನೆ ನೀಡುವುದು ಸಾಧ್ಯವಿರಲಿಲ್ಲ.

ಈ ಬಂಡಾಯ ಮೂಲತಃ ದೋಷಯುಕ್ತ ಕಲ್ಪನೆಯಾಗಿತ್ತಲ್ಲದೆ ಅವ್ಯವಸ್ಥಿತ ರೀತಿಯಲ್ಲಿ ಯೋಜಿತವಾಗಿತ್ತು. ನಿಜವೆಂದರೆ ಅದರ ಹಿಂದೆ ಯೋಜನೆಯೆಂಬುದೇ ಇರಲಿಲ್ಲ. ಅಂತೆಯೇ ಅದು ವಿಫಲಗೊಳ್ಳುವ ಅನುಮಾನವಿದ್ದೇ ಇತ್ತು. ಬಂಡುಗಾರರ ಮುಖಂಡರೆದುರು ನಿರ್ದಿಷ್ಟವಾದ ಕಾರ್ಯಕ್ರಮವೆಂಬುದಿರಲಿಲ್ಲ. ಬೇರೆ ಬೇರೆ ಪಟ್ಟಣಗಳಲ್ಲಿದ್ದ ಬೇರೆ ಬೇರೆ ಮುಂದಾಳುಗಳ ಮಧ್ಯೆ ಸಂಯೋಜನೆ ಅಥವಾ ಸಮಾಲೋಚನೆಯೆಂಬುದೂ ಇರಲಿಲ್ಲ. ಆದರೆ ಬ್ರಿಟಿಷರ ಪಾಲಿಗೆ ಮಾತ್ರ ಸಂಘಟಿತ ಮುಂದಾಳ್ತನವೂ ಇತ್ತು; ಅವರೆದುರು ನಿಶ್ಚಿತ ಗುರಿಯೂ ಇತ್ತು. ಬ್ರಿಟಿಷರನ್ನು ವಿರೋಧಿಸುವ ವಿಷಯದಲ್ಲಿ ಭಾರತೀಯ ಜನತೆಯಲ್ಲೇ ಏಕಮತವಿರಲಿಲ್ಲ. ಉದಾಹರಣೆಗೆ : ಪಂಜಾಬ್ ಪೂರ್ಣತಃ ಬ್ರಿಟಿಷರ ಬೆಂಬಲವಾಗಿ ನಿಂತಿತು. ಮಾತ್ರವಲ್ಲದೆ, ಸಿಖ್ ಸಂಸ್ಥಾನಗಳಿಂದ ಬಂದ ಸೈನ್ಯವೇ ಬ್ರಿಟಿಷರ ಪರವಾಗಿ ಮೊದಲು ದೆಹಲಿಯಲ್ಲಿ, ಆ ಬಳಿಕ ಲಖನೌದಲ್ಲಿ ಬ್ರಿಟಿಷರ ಮಾನವುಳಿಸಲು ಹೋರಾಡಿತು. ನೇಪಾಳದ ದೊರೆಯೂ ಬ್ರಿಟಿಷರ ನೆರವಿಗೆ ಧಾವಿಸಿ ಬಂದ. ಭಾರತೀಯ ಸೈನ್ಯಕ್ಕೆ ಇಂಥ ಕೆಲಸದ ತರಬೇತಿಯೂ ಇರಲಿಲ್ಲ, ಅವರ ಸಂಘಟನೆಯಲ್ಲಿ ಬಿಗುವೂ ಇರಲಿಲ್ಲ. ಬ್ರಿಟಿಷರು ಮಾತ್ರ ವರ್ಷಾಂತ್ಯದೊಳಗೆ ಒಂದೊಂದಾಗಿ ಕೋಟೆ-ಕೊತ್ತಳಗಳನ್ನು ಮರಳಿ ವಶಪಡಿಸಿಕೊಂಡು ಅವುಗಳ ಮೇಲೆ ಮೊದಲಿಗಿಂತ ಹೆಚ್ಚಿನ ಹತೋಟಿಯನ್ನು ಸಾಧಿಸಿದರು.

ದೆಹಲಿ ಮತ್ತೆ ಮರಳಿ ಬ್ರಿಟಿಷರ ಹತೋಟಿಗೆ ಬಂದು, ಶಾಂತಿ ಸ್ಥಾಪನೆಗೊಂಡ ಬಳಿಕ ಪರಿಸ್ಥಿತಿ ಮತ್ತೆ ಸುಧಾರಿಸಬಹುದೆಂದೂ, ತನ್ನ ಪರಿವಾರದ ವರ್ಷಾಶನ ಮತ್ತೆ ಆರಂಭಗೊಳ್ಳಬಹುದೆಂದೂ ಗಾಲಿಬನ ನಿರೀಕ್ಷೆಯಾಗಿತ್ತು. ಆದರೆ ಮುಂದಿನ ಪರಿಸ್ಥಿತಿ ಅವನ ನಿರೀಕ್ಷೆಯನ್ನು ವಿಫಲಗೊಳಿಸಿತು.

ಗಾಲಿಬ್ ದೂರದೃಷ್ಟಿಯುಳ್ಳವನೂ ವ್ಯಾವಹಾರಿಕ ಕುಶಲತೆಯುಳ್ಳವನೂ ಆಗಿದ್ದ. ದೆಹಲಿಯಲ್ಲಿ ಗಲಭೆಯುಂಟಾದಾಗ ಮಾತ್ರ ಗಾಳಿ ಯಾವ ದಿಕ್ಕಿಗೆ ಬೀಸಬಹುದೆಂದು ಯಾರೂ ಹೇಳುವಂತಿರಲಿಲ್ಲ. ಆದ್ದರಿಂದ ಆತ ಬ್ರಿಟಿಷ್ ವಿರೋಧೀ ಚಟುವಟಿಕೆಗಳಿಂದ ಸಾಕಷ್ಟು ದೂರವೇ ಉಳಿದುಕೊಂಡಿದ್ದ. ಆದರೂ ಈ ಎಲ್ಲ ಚಟುವಟಿಕೆಗಳ ಹಾಗು

ಬಹಾದ್ದುರ್ ಶಹನ ಕಾರ್ಯಕಲಾಪಗಳ ಕೇಂದ್ರವಾಗಿದ್ದ ಕೆಂಪು ಕಿಲ್ಲೆಯಿಂದ ಪೂರ್ಣ ಮುಕ್ತನಾಗಿರುವುದೂ ಸಾಧ್ಯವಿರಲಿಲ್ಲ. ದೊರೆಯ ಸಾಹಿತ್ಯಿಕ ಸಲಹೆಗಾರ ಮೊಹಮ್ಮದ್ ಇಬ್ರಾಹಿಮ್ ಔಕ್ 1854ರ ನವಂಬರ್‌ನಲ್ಲೇ ತೀರಿಕೊಂಡಿದ್ದ. ಅವನ ನಂತರ ಗಾಲಿಬನ ಪಾಲಿಗೆ ಬಂದಿತ್ತು ಆ ಹೊಣೆ. ಅವನು ಮೊದಲೇ ರಾಜಮನೆತನದ ಇತಿಹಾಸಕಾರನಾಗಿದ್ದುದಲ್ಲದೆ, ಈ ಹೊಸ ಕೆಲಸವೂ ಸೇರಿ ಅವನು ನಿಯಮಿತವಾಗಿ ದೊರೆಯ ಅರಮನೆಗೆ ಹೋಗುತ್ತಿರುವುದು ಅನಿವಾರ್ಯವಾಗಿತ್ತು. ಮತ್ತೊಂದು ಬದಿಗೆ, ಅವನು ಸ್ನೇಹಪರ ಸಂಪರ್ಕವಿರಿಸಿಕೊಳ್ಳಬಹುದಾದ ಬ್ರಿಟಿಷ್ ಅಧಿಕಾರಿಯೊಬ್ಬನೂ ರಾಜಧಾನಿಯಲ್ಲಿ ಉಳಿದೇ ಇರಲಿಲ್ಲ. ಹೀಗಾಗಿ ಆತ ಬಹಾದ್ದುರ್ ಶಹನ ಅರಮನೆಗೆ ಹೋಗಿ ಬರುತ್ತಿದ್ದರೂ ತನ್ನ ವಿಚಾರಗಳಿಗೆ ಮುಕ್ತ ಅಭಿವ್ಯಕ್ತಿ ನೀಡದಂತೆ ಎಚ್ಚರ ವಹಿಸಿದ್ದ. ಆದರೆ ಆತ ಅದೆಷ್ಟು ಎಚ್ಚರಿಕೆಯಿಂದಿದ್ದರೂ ದೈವ ಅವನ ಬೆಂಗಾವಲಿಗೆ ಬರಲೇ ಇಲ್ಲ.

## ನಾಣ್ಯದ ಬಗ್ಗೆ ಆರೋಪ

ಭಾರತೀಯ ಸೇನೆ ದೆಹಲಿಯನ್ನು ವಶಪಡಿಸಿಕೊಂಡಿದ್ದ ದಿನಗಳಲ್ಲಿ ಬ್ರಿಟಿಷರು ಬಲು ದಕ್ಷವಾದ ಗುಪ್ತಚಾರ ದಳವನ್ನು ದೆಹಲಿ ನಗರ ಮಾತ್ರವಲ್ಲದೆ ಕೆಂಪು ಕಿಲ್ಲೆಯಲ್ಲೂ ಇಟ್ಟಿದ್ದರು. ಈ ಗುಪ್ತಚಾರರು ಬಗೆ ಬಗೆಯ ಸುದ್ದಿ ಸಮಾಚಾರಗಳನ್ನು ಕಲೆ ಹಾಕಿ ತಂದು ಕಾಶ್ಮೀರೀ ಗೇಟ್ ಬಳಿ ಡೇರೆ ಹಾಕಿಕೊಂಡಿದ್ದ ಬ್ರಿಟಿಷ್ ಕಮಾಂಡರ್‌ನಿಗೆ ಒಪ್ಪಿಸುತ್ತಿದ್ದರು. ಒಮ್ಮೊಮ್ಮೆ ಸುಳ್ಳು ಸಮಾಚಾರಗಳನ್ನು ಅವರು ತರುತ್ತಿದ್ದರು. ಒಂದು ದಿನ ಒಬ್ಬ ಗುಪ್ತಚಾರ ಬಹಾದ್ದುರ್ ಶಹನ ದರಬಾರ್‌ನಲ್ಲಿ ಗಾಲಿಬ್ ಹಾಜರಿದ್ದುದು ಮಾತ್ರವಲ್ಲದೆ ಹೊಸ ನಾಣ್ಯದ ಮೇಲೆ ಮುದ್ರಿಸಲು ಹೊಸ 'ಸಿಕ್ಕಾ' (ಮುದ್ರಾಲೇಖನ) ಕೂಡ ದೊರಗೆ ಸಾದರ ಪಡಿಸಿದನೆಂಬ ಸಮಾಚಾರವನ್ನು ತಂದೊಪ್ಪಿಸಿದ. ಈ ಸಮಾಚಾರದಲ್ಲಿ ಸತ್ಯಾಂಶವಿರಲಿಲ್ಲ. ಯಾಕೆಂದರೆ, ಗಾಲಿಬನ ಹೆಸರಿಗೆ ಆರೋಪಿಸಲಾದ ಈ ನಾಣ್ಯ ಲೇಖನ ಯಾವನೋ ಒಬ್ಬ ಯುವಕವಿ ಬರೆದುದಾಗಿತ್ತು. ಗಾಲಿಬ್ ಇದನ್ನು ದೊರೆಗೆ ಸಾದರಪಡಿಸಿದನೆಂದು ಹೇಳಲಾದ ದಿನಕ್ಕಿಂತ ಅದೆಷ್ಟೋ ಹಿಂದೆ ಈ ಸಂಗತಿ ಪತ್ರಿಕೆಯೊಂದರಲ್ಲಿ ಪ್ರಕಟವೂ ಆಗಿತ್ತು. ಸತ್ಯ ಹೀಗಿದ್ದರೂ, ಗುಪ್ತಚಾರನಿಂದ ಬಂದ ಸಮಾಚಾರ ಸರಕಾರೀ ಕಡತಗಳಲ್ಲಿ ದಾಖಲಾಯಿತು. ದೆಹಲಿ ನಗರ ಮತ್ತೆ ಬ್ರಿಟಿಷರ ವಶಕ್ಕೆ ಬಂದ ಬಳಿಕ ಗಾಲಿಬ್ ದೆಹಲಿಯ ಚೀಫ್ ಕಮೀಷನರ್‌ನ ಭೇಟಿಗೆ ಹೋದೊಡನೆ ಈ ಸಮಾಚಾರದ ಪ್ರಸ್ತಾಪ ಬಂತು. ಬಂಡಾಯದ ಸಂದರ್ಭದಲ್ಲಿ ಗಾಲಿಬ್ ಸಕ್ರಿಯವಾಗಿ ಯಾವ ಚಟುವಟಿಕೆಯಲ್ಲೂ ಭಾಗವಹಿಸಿರಲಿಲ್ಲವಾದ್ದರಿಂದ ಅವನ ಪ್ರಾಣ ಹಾಗು ಇದ್ದಷ್ಟು ಆಸ್ತಿಗಳು ಸುರಕ್ಷಿತವಾಗಿದ್ದರೂ ಈ 'ಸಿಕ್ಕಾ' ಸಮಾಚಾರ ಮಾತ್ರ ಅವನಿಗೆ ಭಾಧಕವಾಗಿಯೇ ಪರಿಣಮಿಸಿತು. ಕೇವಲ ಸಂದೇಹ ಮಾತ್ರದಿಂದಲೇ ಅನೇಕರು ಪ್ರಾಣ ಕಳೆದುಕೊಂಡಿದ್ದ ಅಥವಾ ಕಾರಾಗೃಹಕ್ಕೆ

ತಳ್ಳಲ್ಪಟ್ಟಿದ್ದ ಆ ದಿನಗಳಲ್ಲಿ ಗಾಲಿಬನಿಗೆ ಬ್ರಿಟಿಷರು ದಯೆ ತೋರಿದ್ದೇ ವಿಶೇಷವಾಗಿತ್ತು, ನಿಜ. ಆದರೆ ಗುಪ್ತಚಾರರು ತಂದೊಪ್ಪಿಸಿದ ಈ ಸಮಾಚಾರದ ಪರಿಣಾಮವಾಗಿ ಅವನ ಪರಿವಾರದ ವರ್ಷಾಶನವನ್ನು ನಿಲ್ಲಿಸಿಬಿಡಲಾಯಿತು. ಅವನಿಗೆ ಗವರ್ನರ್ ಜನರಲ್ ಅಥವಾ ಲೆಫ್ಟಿನೆಂಟ್ ಗವರ್ನರ್ ನಡೆಸುತ್ತಿದ್ದ ದರಬಾರಗಳಿಗಾಗಿ ಆಮಂತ್ರಣ ಕಳಿಸುವುದನ್ನೂ ನಿಲ್ಲಿಸಲಾಯಿತು. ನಗರದಲ್ಲಿ ಶಾಂತಿ ನೆಲೆಗೊಂಡನಂತರ ಎಲ್ಲವೂ ಸರಿಹೋಗಿ ಯಥಾಸ್ಥಿತಿಗೆ ಬರಬಹುದೆಂದು ಗಾಲಿಬನ ನಿರೀಕ್ಷೆಯಾಗಿತ್ತು. ಆದರೆ ಅವನ ಪಾಲಿಗೆ ದೊಡ್ಡ ನಿರಾಸೆಯೇ ಕಾದಿತ್ತು. ಪರಿಸ್ಥಿತಿ ಸುಧಾರಿಸುವ ಬದಲು ಕೆಡುತ್ತಲೇ ಹೋಯಿತು. ಅವನ ಕೆಲ ಮಿತ್ರರೂ ಪ್ರಶಂಸಕರೂ ಈ ಸಂದರ್ಭದಲ್ಲಿ ಮುಂದೆ ಬಂದು ನೆರವಾಗಿರದಿದ್ದರೆ ಅವನ ತಾಳ್ಮೆಯು ಒಡೆದು ಹೋಗುವಷ್ಟು ಅವನ ತಾಪತ್ರಯಗಳು ಬೆಳೆಯಬಹುದಿತ್ತು. ಪುಣ್ಯಕ್ಕೆ ರಾಮಪುರದ ನವಾಬ್ ಯುಸುಫ್ ಅಲಿ ಖಾನ್ ಈ ಕಷ್ಟದ ಕಾಲದಲ್ಲಿ ಗಾಲಿಬನ ಕೈಗೋಲಾದ.

## ರಾಮಪುರದ ಸಂಬಂಧ

ನವಾಬ್ ಯೂಸುಫ್ ಖಾನ್ ತನ್ನ ತಂದೆ ಮೊಹಮ್ಮದ್ ಸಯೀದ್ ಖಾನ್ 1855 ರಲ್ಲಿ ತೀರಿಕೊಂಡ ತರುವಾಯ ರಾಮಪುರದ ನವಾಬನೆಂದು ಅಧಿಕಾರಕ್ಕೆ ಬಂದವ. ತುಂಬು ಪ್ರಾಯದ ದಕ್ಷ ನವಾಬ್ ಸ್ವತಃ ಕವಿಯಾಗಿದ್ದು ಅಭಿಮಾನಾಸ್ಪದ ಕಾವ್ಯಸಾಧನೆ ಮಾಡಿದವ. ಅವನ ಎಳೆವಯಸ್ಸಿನಲ್ಲೇ ಅವನ ತಂದೆ ಅವನ ಶಿಕ್ಷಣವನ್ನು ಪೂರ್ಣಗೊಳಿಸಲೆಂದು ದೆಹಲಿಗೆ ಕಳಿಸಿದ್ದ. ಆ ಕಾಲದಲ್ಲಿ ಅವನಿಗೆ ಕಲಿಸಿದ ಅಧ್ಯಾಪಕರಲ್ಲಿ ಗಾಲಿಬನೂ ಒಬ್ಬನಾಗಿದ್ದು ಅವನಿಗೆ ಕೊಂಚ ಮಟ್ಟಿಗೆ ಪರ್ಶಿಯನ್ ಕಲಿಸಿದ್ದ. ನವಾಬ್ ರಾಮಪುರಕ್ಕೆ ಮರಳಿದನಂತರ ಸ್ವಾಭಾವಿಕವಾಗಿಯೇ ಈ ಸಂಪರ್ಕ ಕಡಿದು ಹೋದಂತಾಗಿತ್ತು. 1855 ರಲ್ಲಿ ಅವನು ಪಟ್ಟವೇರಿದ ಸಮಾಚಾರ ಕೇಳಿ ಗಾಲಿಬನೇ ಒಂದು ಸಾಂದರ್ಭಿಕ ಕವನವನ್ನು ಕಳಿಸಿ ಹಿಂದಿನ ಸ್ನೇಹಸೂತ್ರವನ್ನು ಕೈಗೆತ್ತಿಕೊಳ್ಳುವ ಪ್ರಯತ್ನ ಮಾಡಿದ. ಆದರೆ ಆ ಕಡೆಯಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಗಾಲಿಬ್ ಮೌನಕ್ಕೆ ಮೊರೆಹೊಕ್ಕ. 1857 ರ ಆರಂಭದ ದಿನಗಳಲ್ಲಿ ಅಂದರೆ ಸಿಪಾಯರ ದಂಗೆಗಿಂತಲೂ ಮೊದಲು ಗಾಲಿಬನ ಆತ್ಮೀಯ ಮಿತ್ರ ಮೌಲ್ವಿ ಫಝುಲ್ ಹಖ್ ರಾಮಪುರದಲ್ಲಿದ್ದ. ಆತ ಯುವಕ ನವಾಬನ ವಿಶ್ವಾಸಪಾತ್ರನಾಗಿದ್ದ. ಫಝುಲ್ ಹಖ್ ಗಾಲಿಬನೊಂದು ಕಸೀದಾ (ಕವನ) ಬರೆದು ನವಾಬನಿಗೆ ಕಳಿಸುವಂತೆ ಹೇಳಿಕಳಿಸಿದ. ಅದರಿಂದಾಗಿ ಅವರಿಬ್ಬರ ಸ್ನೇಹ ಮತ್ತೆ ಚೇತರಿಸಿಕೊಂಡು ಗಾಲಿಬನಿಗೆ ಖಾಯಂ ವರ್ಷಾಶನ ಅಥವಾ ಏಕಕಾಲಕ್ಕೇ ಒಂದಿಷ್ಟು ಧನಸಹಾಯವಾದರೂ ದೊರೆಯುವಂತಾದೀತೆಂದು ಅವನ ಯೋಚನೆಯಾಗಿತ್ತು.

ಈ ಬಾರಿ ಗಾಲಿಬನ ಭಾಗ್ಯದ ನಕ್ಷತ್ರ ನಕ್ಕಿತು. ಆತ ಕಳಿಸಿದ 'ಕಸೀದಾ'ಕ್ಕೆ ಅತ್ಯಂತ ಆದರದ ಸ್ವಾಗತ ದೊರೆಯಿತಲ್ಲದೆ ಸ್ವಯಂ ನವಾಬನೂ ಗಾಲಿಬನ ಶಿಷ್ಯತ್ವ

ಸ್ವೀಕರಿಸುವ ನಿರ್ಣಯ ಕೈಕೊಳ್ಳುವಂತಾಯಿತು. ಈ ಸಂಬಂಧ ಕುದುರಿ ಕೆಲ ತಿಂಗಳೂ ಕಳೆದಿರಲಿಲ್ಲ. 1857ರ ರಾಜಕೀಯ ಬಿರುಗಾಳಿ ಬೀಸಿತು. ಈ ಕಲುಷಿತ ವಿಫಲಗೊಂಡಾಗ, ಗಾಲಿಬ್ ತನಗೊಂದು ನಿಯಮಿತ ಸಂಭಾವನೆ ನಿಗದಿಗೊಳಿಸಿ ತನ್ನನ್ನು ಆರ್ಥಿಕ ಕಷ್ಟದಿಂದ ಮುಕ್ತಗೊಳಿಸಬೇಕೆಂದು ರಾಮಪುರದ ನವಾಬನಿಗೆ ಬಿನ್ನವಿಸಿಕೊಂಡ. ಸರಿ, ತತ್ಪರಿಣಾಮವಾಗಿ ರಾಮಪುರದ ಖಜಾನೆಯಿಂದ ಗಾಲಿಬನಿಗೆ ನೂರು ರೂ. ಗಳ ಮಾಸಾಶನ ನೀಡಬೇಕೆಂದು ನವಾಬ್ ಯೂಸುಫ್ ಅಲಿ ಖಾನ್‌ನ ಆಜ್ಞೆ ಹೊರಟಿತು.

## *ದಸ್ತಂಬೂ*

ದೆಹಲಿಯಲ್ಲಿ ದಂಗೆ ನಡೆದ ದಿನಗಳಲ್ಲಿ ಗಾಲಿಬ್ ಮನೆಯಲ್ಲಿ ಕೈಕಟ್ಟಿಕೊಂಡು ಕೂತಿರುವ ಬದಲು ನಗರದಲ್ಲಿ ನಡೆಯುತ್ತಿದ್ದ ಚಲನ-ವಲನಗಳ ಬಗ್ಗೆ ಟಿಪ್ಪಣಿಗಳನ್ನು ಬರೆದಿಟ್ಟಿದ್ದ. ದಿನಂಪ್ರತಿ ನಡೆದ ಘಟನಾವಳಿಯನ್ನು ರೇಖಿಸಿಟ್ಟ ನಿಯಮಿತ ದಿನಚರಿ ಅದಾಗಿರದಿದ್ದರೂ ಮುಂದೆ ಯಾವಾಗಲಾದರೂ ಈ ಮಹತ್ವದ ಕಾಲಖಂಡದ ಬಗ್ಗೆ ವಿವರವಾದ ಚರಿತ್ರೆ ಬರೆಯಲು ಉಪಯೋಗಕ್ಕೆ ಬರಬಹುದಾದ ವಿಶಿಷ್ಟ ಘಟನೆಗಳ ಸಂಕ್ಷಿಪ್ತ ಟಿಪ್ಪಣಿಗಳು ಅದರಲ್ಲಿ ಅಡಕಗೊಂಡಿದ್ದವು. ಬ್ರಿಟಿಷರು ಮತ್ತೆ ದೆಹಲಿಯ ಅಧಿಕಾರ ವಹಿಸಿಕೊಂಡ ಬಳಿಕ ಆ ಟಿಪ್ಪಣಿಗಳ ಆಧಾರದಿಂದ ಅವನೊಂದು ಗ್ರಂಥರಚನೆ ಮಾಡಿದ. ಆ ಪರ್ಶಿಯನ್ ಗ್ರಂಥದ ಹೆಸರು *ದಸ್ತಂಬೂ*. ನಾಮಪದಗಳ ಹೊರತಾಗಿ ಈ ಗ್ರಂಥದಲ್ಲಿ ಇತರ ಅರಬ್ಬಿ ಶಬ್ದಗಳನ್ನೇ ಬಳಸಿಲ್ಲವೆಂದು ಆತ ಹೇಳಿಕೊಂಡಿದ್ದಾನೆ. ಆದರೆ ಈ ಹೇಳಿಕೆಯಲ್ಲಿ ಸಂಪೂರ್ಣ ಸತ್ಯಾಂಶವಿಲ್ಲ. ಅವನೆಷ್ಟು ಪ್ರಯತ್ನ ಮಾಡಿರಬಹುದಾದರೂ ಕೆಲವು ಅರಬ್ಬಿ ಶಬ್ದಗಳು ಈ ಗ್ರಂಥದಲ್ಲಿ ನುಸುಳಿಕೊಂಡೇ ಬಿಟ್ಟಿವೆ. ಆಗ ನಿತ್ಯದ ಬಳಕೆಯಲ್ಲಿದ್ದ ಅರಬ್ಬೀ ಶಬ್ದಗಳನ್ನು ತನ್ನ ಈ ಕೃತಿಯಲ್ಲಿ ಉಪಯೋಗಿಸಕೂಡದೆಂಬ ಅವನ ಛಲದಿಂದಾಗಿ ಸಮಕಾಲೀನ ಸಮಾಜದ ವ್ಯವಹಾರದಲ್ಲಿ ಬಳಕೆಯಲ್ಲಿಲ್ಲದ ಹಳೆಯ ಕಾಲದ ಸಮಾನಾರ್ಥವುಳ್ಳ ಪರ್ಶಿಯನ್ ಶಬ್ದಗಳನ್ನು ಹುಡುಹುಡುಕಿ ಬಳಸುವುದು ಅವನಿಗೆ ಅನಿವಾರ್ಯವಾಯಿತು. ಅದರಿಂದಾಗಿ ಆ ಪುಸ್ತಕ ಓದುವುದಕ್ಕೂ ಕಷ್ಟ, ಅರ್ಥ ಮಾಡಿಕೊಳ್ಳುವುದಕ್ಕೂ ಕಷ್ಟವೆನಿಸುವಂತಾಯಿತು.

ಆ ಕಾಲದ ಘಟನಾವಳಿ ತಿಳಿದುಕೊಳ್ಳುವುದಕ್ಕೆ ಅದೊಂದು ಪೂರ್ತಿ ವಿಶ್ವಸನೀಯ ಸಂದರ್ಭ ಗ್ರಂಥವೆಂದೂ ಹೇಳಲಾಗದು. ದಂಗೆಯ ಕಾಲದಲ್ಲಿ ಗಾಲಿಬ್ ಬಹಾದ್ದೂರ್ ಶಹನ ಸಂಗಡ ಸ್ನೇಹದಿಂದಿದ್ದನಲ್ಲದೆ ಬ್ರಿಟಿಷ್‌ವಿರೋಧೀ ವಿಚಾರಗಳಿಗೆ ಆಗೀಗ ಚಾಲನೆಯನ್ನು ನೀಡಿದ್ದನಷ್ಟೆ. ಬ್ರಿಟಿಷರ ವಿರುದ್ಧ ಪ್ರತ್ಯಕ್ಷ ಕ್ರಿಯಾಚರಣೆಗೇನೂ ಆತ ಇಳಿದಿರಲಿಲ್ಲ. ಆದರೆ ತನ್ನ ನಿಷ್ಕ್ರಿಯಾಪ್ರವೃತ್ತಿ ಬ್ರಿಟಿಷರಿಗೆ ಸಮಾಧಾನಕರವಾಗಿ ಪರಿಣಮಿಸಬಹುದೆಂಬ ಖಾತರಿಯೂ ಅವನ ಮನಸ್ಸಿನಲ್ಲಿರಲಿಲ್ಲ. ಹಾಗೆ ನೋಡಿದರೆ ಬಹಾದ್ದೂರ್ ಶಹನೊಡನೆ ಅವನು ಹೊಂದಿದ್ದ ಗೆಳೆತನ ಬ್ರಿಟಿಷ್ ವಿರೋಧಿ ಕ್ರಿಯೆಯೆಂದೇ ಪರಿಗಣಿಸಲ್ಪಡುವ ಸಾಧ್ಯತೆಯಿತ್ತು. ಅಂತೆಯೇ ಅವನು *ದಸ್ತಂಬೂ*

ಬರೆಯುವಾಗ ಭಾರತೀಯ ಸೈನಿಕರ ದೋಷಗಳನ್ನು ಕಡಿಮೆಗೊಳಿಸದಂತೆಯೂ, ಬ್ರಿಟಿಷ್ ಸೈನ್ಯದ ಅತಿರೇಕಗಳನ್ನು ಅತಿರಂಜಿತಗೊಳಿಸದಂತೆಯೂ ಮುಂಜಾಗ್ರತೆ ವಹಿಸಿದ್ದ. ಈ ಗ್ರಂಥರಚನೆ ಮುಗಿದ ಬಳಿಕ ಅದರ ಗೌರವ ಪ್ರತಿಗಳನ್ನು ತನ್ನ ಆತ್ಮೀಯರೂ ಅಭಿಮಾನಿಗಳೂ ಆಗಿದ್ದ ಕೆಲವು ಬ್ರಿಟಿಷ್ ಅಧಿಕಾರಿಗಳಿಗೆ ಕಳಿಸುವ ವಿಚಾರವನ್ನಿಟ್ಟುಕೊಂಡಿದ್ದರಿಂದ ಅವರಿಗೆ ಆಕ್ಷೇಪಾರ್ಹವೆನಿಸದ ರೀತಿಯಲ್ಲೇ ಕೆಲವು ಘಟನೆಗಳನ್ನು ಹತ್ತಿಕ್ಕಿ ಮತ್ತೆ ಕೆಲವನ್ನು ಎತ್ತಿ ಹಿಡಿದು ಬರೆದಿದ್ದ. ಈ ಕಾರಣಗಳಿಂದಾಗಿ ಇಂಥ ಕೃತಿಯೊಂದನ್ನು ಚಾರಿತ್ರಿಕ ಆಧಾರಗ್ರಂಥವೆಂದು ಪರಿಗಣಿಸುವುದು ಕಷ್ಟ.

ಬ್ರಿಟಿಷ್ ಅಧಿಕಾರಿಗಳೊಡನೆ ಮತ್ತೆ ಆತ್ಮೀಯವಾಗಿ ವರ್ತಿಸುವುದಕ್ಕೆ ಹಾಗು ಕಷ್ಟದ ಕಾಲದಲ್ಲೂ ಅವರೊಡನಿದ್ದ ತನ್ನ ಸ್ನೇಹ ಅಬಾಧಿತವಾಗಿ ಉಳಿದಿತ್ತೆಂದು ತೋರಿಸಿಕೊಳ್ಳುವುದಕ್ಕೆ ಈ ಪುಸ್ತಕವೊಂದು ಸಾಧನವಾಗಬಹುದೆಂಬ ನಿರೀಕ್ಷೆ ಅವನದಾಗಿತ್ತು. ಪುಸ್ತಕ ಪ್ರಕಟವಾದ ಕೂಡಲೇ ಆತ ಭಾರತ ಹಾಗು ಇಂಗ್ಲೆಂಡ್‌ನಲ್ಲಿದ್ದ ಪ್ರತಿಷ್ಠಿತ ಬ್ರಿಟಿಷ್ ಮಿತ್ರರಿಗೆ ಗೌರವಪ್ರತಿಗಳನ್ನು ರವಾನಿಸಿದ. ಆದರೆ ಅದರಿಂದ ನಿರೀಕ್ಷಿತ ಪರಿಣಾಮವೇನೂ ಕಂಡುಬರಲಿಲ್ಲ. ಈ ಪುಸ್ತಕದ ಮುಖ್ಯ ದೌರ್ಬಲ್ಯವೆಂದರೆ ಅದರ ಕ್ಲಿಷ್ಟವಾದ ಭಾಷೆ. ಆದ್ದರಿಂದ ಬ್ರಿಟಿಷ್ ಅಧಿಕಾರಿಗಳ ಪ್ರೇಮ ಸಂಪಾದನೆ ಮಾಡಿಕೊಳ್ಳಬೇಕೆಂಬ ಅವನ ವೈಯಕ್ತಿಕ ಪ್ರಯತ್ನ ಸಫಲವಾಗದೇ ಹೋಯಿತು. ಈ ಮಧ್ಯೆ ಬ್ರಿಟಿಷರು ಅವನನ್ನು ಕ್ಷಮಿಸುವಂತೆಯೂ ಅನೇಕ ಮಿತ್ರರ ಪ್ರಯತ್ನ ನಡೆದೇ ಇತ್ತು. ಅವರ ಪ್ರಯತ್ನ ಎಷ್ಟರ ಮಟ್ಟಿಗೆ ಸಫಲವಾಗುತ್ತಿತ್ತೋ ಇಲ್ಲವೋ, ರಾಮಪುರದ ನವಾಬ್ ಮಾಡಿದ ಸದ್ಭಾವನೆಯ ಶಿಫಾರಸ್ಸು ಬ್ರಿಟಿಷರ ಮನಸ್ಸಿನ ಮೇಲೆ ಪರಿಣಾಮ ಮಾಡಿತು. ಅಂತೆಯೇ 1860 ರ ಮೇ ತಿಂಗಳಲ್ಲಿ ಬ್ರಿಟಿಷ್ ಅಧಿಕಾರಿಗಳು ಅವನ ಪಾರಿವಾರಿಕ ವರ್ಷಾಶನ ಮತ್ತೆ ಕೊಡಲಾರಂಭಿಸುವ ಅಪ್ಪಣೆ ಹೊರಡಿಸಿದರು. ಅದಾದ ಮೂರು ವರ್ಷಗಳ ನಂತರ, ಅಂದರೆ 1863 ರ ಮಾರ್ಚ್‌ನಿಂದ ಅವನಿಗೆ ಸರಕಾರೀ ದರಬಾರ್‌ಗಳಲ್ಲಿ ಉಪಸ್ಥಿತನಿರುವ ಗೌರವವನ್ನು ಮತ್ತೆ ಮುಂದುವರಿಸಲಾಯಿತು. ಹೀಗೆ ಅವನ ಸ್ಥಿತಿಯೂ ಸುಧಾರಿಸಿತು; ಮೊದಲಿನ ಗೌರವವೂ ಪ್ರಾಪ್ತವಾಯಿತು.

## 'ಖಾತಿ' ಬುರ್ಹಾನ್

ಗಾಲಿಬ್ ಮೂಲತಃ ಒಬ್ಬ ಕವಿ, ಮತ್ತು ಲೇಖಕ. ತನಗೆಷ್ಟು ಕಷ್ಟ - ನಷ್ಟಗಳಿದ್ದರೂ ಅವನು ಬಲು ದೀರ್ಘ ಕಾಲ ಸಾಹಿತ್ಯಿಕ ಚಟುವಟಿಕೆಗಳಿಂದ ದೂರವಿರುವುದು ಸಾಧ್ಯವೇ ಇರಲಿಲ್ಲ. ದೆಹಲಿಯಲ್ಲಿ ನಡೆದ ದಂಗೆಯ ಕಾಲದಲ್ಲೂ ಆಗೊಮ್ಮೆ ಈಗೊಮ್ಮೆ ಕೆಂಪು ಕಿಲ್ಲೆಗೆ ಹೋಗಿ ಬರುವ ಸಮಯನ್ನು ಹೊರತು ಪಡಿಸಿ ಆತ ತನ್ನಷ್ಟಕ್ಕೆ ತಾನಾಗಿ ಮನೆಯೊಳಗೇ ಇದ್ದು ಬಿಡುತ್ತಿದ್ದ. ಅವನು ಮೊದಲಿನಿಂದಲೂ ಸತತ ವಾಚನಪ್ರೇಮಿ. ಅವನ ಸ್ಮರಣಶಕ್ತಿಯೂ ಅದ್ಭುತವಾಗಿತ್ತು. ಪುಸ್ತಕಗಳೇ ಅವನ ಪರಮ ಮಿತ್ರರು. ಹೀಗೆ ಅವನಿಗೆ ಅತ್ಯಂತ ಪ್ರಿಯವಾದ ಗ್ರಂಥರಾಶಿಯಲ್ಲಿ ಬುರ್ಹಾನ್-ಎ-ಖಾತಿ ಎಂಬ ಪರ್ಶಿಯನ್ ಶಬ್ದಕೋಶವೊಂದಿತ್ತು. ತನ್ನ ಬಿಡುವಿನ ಸಮಯದಲ್ಲಿ ಆತ ಈ ಶಬ್ದಕೋಶದ ಪುಟಗಳ

ಮೇಲೆ ಕಣ್ಣಾಡಿಸುತ್ತ ಕೂಡಿರುತ್ತಿದ್ದ. ಮೊಹಮ್ಮದ್ ಹುಸೈನ್ ತಬೀಜಿ ಸಂಪಾದಿಸಿದ ಈ ಪ್ರಸಿದ್ಧ ಶಬ್ದಕೋಶದ ಹೊಸ ಆವೃತ್ತಿಯೂ ಕಲ್ಕತ್ತೆಯಿಂದ ಪ್ರಕಟವಾಗಿತ್ತು. ಅದರ ಮೇಲೆ ಕಣ್ಣಾಡಿಸುತ್ತ ಕುಳಿತಾಗಲೆಲ್ಲ ಗಾಲಿಬನಿಗೆ ಅದರಲ್ಲಿಯ ಅನೇಕ ದೋಷಗಳು ಕಂಡು ಬರುತ್ತಿದ್ದವು. ಆತ ಆ ದೋಷಗಳ ಕುರಿತಾದ ತನ್ನ ಟಿಪ್ಪಣಿಗಳನ್ನು ಗ್ರಂಥದ ಪುಟಪುಟದ ಮೇಲೆ ತೆರವಿದ್ದ ಜಾಗದಲ್ಲಿ ಬರೆದಿಡಲಾರಂಭಿಸಿದ. ಇಂಥ ಅಸಂಖ್ಯ ದೋಷಗಳೇ ಹೊರಟವು. ಹೊರಗಿನ ವಾತಾವರಣ ತಿಳಿಗೊಂಡ ಬಳಿಕ ತನ್ನ ಶಿಷ್ಯರಿಗೂ ಸ್ನೇಹಿತರಿಗೂ ಉಪಯೋಗವಾದೀತೆಂಬ ದೃಷ್ಟಿಯಿಂದ ತನ್ನ ಟಿಪ್ಪಣಿಗಳನ್ನೆಲ್ಲ ನಕಲು ತೆಗೆಯಿಸಿದ. ಮೊದಮೊದಲು ಅವುಗಳನ್ನೆಲ್ಲ ಪ್ರಕಟಿಸುವ ಉದ್ದೇಶವೇನೂ ಅವನಿಗಿರಲಿಲ್ಲ. ಆದರೆ ಕೆಲ ದಿನಗಳಲ್ಲಿ ಅವನ ಕೆಲ ಮಿತ್ರರು ಈ ಟಿಪ್ಪಣಿಗಳ ಪ್ರಕಟಣೆ ಸಾಮಾನ್ಯ ವಾಚಕನಿಗೆ ಬಲು ಉಪಯುಕ್ತವಾದೀತೆಂದೂ ಆದರಿಂದ ಅವನೊಬ್ಬ ಪರ್ಶಿಯನ್ ವಿದ್ವಾಂಸನೆಂದು ಮೊದಲೇ ಪಡೆದಿದ್ದ ಖ್ಯಾತಿ ಅಧಿಕಗೊಂಡೀತೆಂದೂ ಗಾಲಿಬನಿಗೆ ಸಲಹೆಯಿತ್ತರು. ಮೊದಲಿನಿಂದ ಭಾರತದ ಪರ್ಶಿಯನ್ ವಿದ್ವಾಂಸರೆಂದರೆ ಆತ ಮೂಗು ಮುರಿಯುತ್ತ ಬಂದವ. ಪರ್ಶಿಯನ್ ಭಾಷೆಯಲ್ಲಿ ಪಾಂಡಿತ್ಯ ಅಷ್ಟಕಷ್ಟೆ ಎಂಬ ಅಭಿಪ್ರಾಯ ಅವನದಾಗಿತ್ತು. ಬುರ್ಹನ್-ಎ-ಖಾತಿ ಯ ಸಂಕಲನಕಾರನ ವಂಶಜರು ಇರಾನಿನವರಾದರೂ ಅವನು ಹುಟ್ಟಿದ್ದು ಬೆಳೆದದ್ದು ಭಾರತದಲ್ಲೇ. ಅಂತೆಯೇ ಗಾಲಿಬ್ ಈ ಶಬ್ದಕೋಶದ ಬಗೆಗಿನ ತನ್ನ ಟೀಕೆ-ಟಿಪ್ಪಣಿಗಳನ್ನು ಪ್ರಕಟಿಸಿದರೆ ಭಾರತೀಯ ಪರ್ಶಿಯನ್ ಲೇಖಕರು ವಿಶ್ವಾಸಾರ್ಹ ಅಲ್ಲ ಎಂಬ ತನ್ನ ತೀರ್ಮಾನವನ್ನು ಈ ಮೂಲಕ ಧೃಡಪಡಿಸಿದಂತಾಗುತ್ತದೆಂದು ಅವನ ಮಿತ್ರರು ಅವನನ್ನು ಹುರುದುಂಬಿಸಿದರು. ಹೀಗಾಗಿ ಅವನ ಈ ಗ್ರಂಥ ಖಾತಿ ಬುರ್ಹನ್ ಎಂಬ ಹೆಸರಿನಿಂದ 1862 ರಲ್ಲಿ ಮೊದಲ ಬಾರಿಗೆ ಬೆಳಕು ಕಂಡಿತು. ಆದರೆ, ಯಾವುದೇ ಬದಲಾವಣೆಯೆಂದರೆ ಮನುಷ್ಯನ ಮನಸ್ಸು ದಿಗ್ಗನೇ ಎಚ್ಚರಗೊಳ್ಳುತ್ತದೆ. ಯಾವ ಬದಲಾವಣೆಯನ್ನಾಗಲೀ, ಹೊಸ ಹೊಸ ಪ್ರಯೋಗಗಳನ್ನಾಗಲೀ ಮಾಡಲು ಅಳುಕುವ ನಾವು - ಅನೇಕರು - ನಮ್ಮ ಅಜ್ಜ-ಮುತ್ತಜ್ಜರು ಹಾಕಿ ಕೊಟ್ಟ ಹಾದಿಯನ್ನೇ ತುಳಿಯಬಯಸುತ್ತೇವೆ. ವಿಷಾದದ ಸಂಗತಿಯೆಂದರೆ ಯಾವುದೊಂದು ವಸ್ತುಸ್ಥಿತಿಯ ನಿರುಪಯುಕ್ತತೆ ಅಥವ ನಿರರ್ಥಕತೆಯ ಬಗ್ಗೆ ನಮಗೆ ಖಾತರಿಯಾಗಿದ್ದರೂ ಅದು ನಮ್ಮ ಪೂರ್ವಜರ ಕಾಲದಿಂದ ನಡೆದು ಬಂದ ಪರಂಪರೆಯೆಂಬ ಹಾಗು ಅದರ ಬದಲಾವಣೆ ಅಥವಾ ಸುಧಾರಣೆ ಸಾರ್ವಜನಿಕರಿಗೆ ಹಿಡಿಸಲಿಕ್ಕಿಲ್ಲವೆಂಬ ನಿಮಿತ್ತದಿಂದ ಅದನ್ನೇ ಮುಂದುವರಿಸಿಕೊಂಡು ಹೋಗುವುದು. ಈ ಮಾತು ಶಿಕ್ಷಣ ಹಾಗು ಪಾಂಡಿತ್ಯವನ್ನೊಳಗೊಂಡು ಎಲ್ಲ ರಂಗಗಳಿಗೂ ಅನ್ವಯಿಸುತ್ತದೆ. ಬಹುಕಾಲದಿಂದ ಪರ್ಶಿಯನ್ ಭಾಷೆಯಲ್ಲಿ ಬುರ್ಹನ್-ಎ-ಖಾತಿ ಎಂದರೊಂದು ಅಧಿಕೃತ ಶಬ್ದಕೋಶವೆಂದೇ ಹೆಸರಾಗಿತ್ತು. ಎಲ್ಲ ವಿದ್ವಾಂಸರೂ ಈ ನಂಬಿಕೆಗೆ ತಮ್ಮ ಮುದ್ರೆಯೊತ್ತಿ ಬಿಟ್ಟಿದ್ದರು. ಈ ನಂಬಿಕೆಯ ವಿರುದ್ಧ ದನಿಯೆತ್ತುವುದೆಂದರೆ ಉದ್ಧಟತನದ ಹಾಗು ಅಪವಿತ್ರ ಮಾತೆನಿಸುತ್ತಿತ್ತು. ಗಾಲಿಬ್ ಮಾಡಿದ್ದು ಅದೇ ಅಪರಾಧವಷ್ಟೆ. ಅವನ ಗ್ರಂಥ

ಪ್ರಕಟವಾಗಿದ್ದೇ ತಡ, ಒಂದು ದೊಡ್ಡ ಬಿರುಗಾಳಿಯೇ ಬೀಸಿತು. ಅವನ ಧೋರಣೆಯನ್ನು ಖಂಡಿಸುವ ಪುಸ್ತಿಕೆಗಳೂ ಕರಪತ್ರಗಳೂ ಪುಂಖಾನುಪುಂಖವಾಗಿ ಪ್ರಕಟಗೊಂಡವು. ಗಾಲಿಬ್ ಮತ್ತು ಅವನ ಮಿತ್ರರು ಕೂಡ ಕೈಕಟ್ಟಿಕೊಂಡು ಕೂಡಲಿಲ್ಲ. ಈ ಧಾಳಿಯನ್ನೆದುರಿಸಲು ಅವರೂ ಕಂಕಣ ಕಟ್ಟಿದರು. ಕಾಲಕ್ರಮೇಣ ಈ ಬಿರುಗಾಳಿಯ ರಭಸ ಕಡಿಮೆಯಾಯಿತೇನೋ ನಿಜ. ಆದರೆ ಅದು ಸಂಪೂರ್ಣವಾಗಿ ನಿಂತು ಹೋಗಲಿಲ್ಲ. ನಿಜವಾಗಿ ಹೇಳಬೇಕೆಂದರೆ ಅಮೀನುದ್ದೀನ್ ಎಂಬ ಲೇಖಕ ಗಾಲಿಬನ ಬಗ್ಗೆ ಬರೆದ ಅವಮಾನಕಾರಕ ಮಾತುಗಳ ಬಗ್ಗೆ ಅವನ ಮೇಲೆ ಮಾನಹಾನಿ ಮೊಕದ್ದಮೆಯನ್ನೇ ಹೂಡಬೇಕಾಯಿತು. ಅವನಿಗೆ ಅದರಲ್ಲಿ ಯಶ ಮಾತ್ರ ಸಿಗಲಿಲ್ಲ. ಅಂದಿನ ಕೆಲ ಖ್ಯಾತ ಪಂಡಿತರು ಆ ಲೇಖಕನ ಮಾತುಗಳಿಗೆ ಬೇರೆ ಅರ್ಥವೇ ಹೊರಡುವುದಾಗಿ ವಿವರಿಸಿ ಅವನ ಮೊಂಡು ವಾದದ ತೀಕ್ಷ್ಣತೆಯನ್ನು ಕಡಿಮೆಗೊಳಿಸಿ ತೋರಿಸಲು ಪ್ರಯತ್ನಿಸಿದರು. ಅದರಿಂದಾಗಿ ಗಾಲಿಬ್ ನಿರ್ವಾಹವಿಲ್ಲದೆ ಕೋರ್ಟಿನ ಹೊರಗೆ ಆ ಮೊಕದ್ದಮೆ ಬಗೆಹರಿಸಿಕೊಳ್ಳಲೊಪ್ಪಿ ತನ್ನ ಮಾನನಷ್ಟದ ಕುರಿತಾದ ಬೇಡಿಕೆಯನ್ನು ಹಿಂದೆಗೆದುಕೊಳ್ಳಬೇಕಾಗಿತು.

## ರಾಜ ಕವಿ

1860 ರಲ್ಲಿ ಗಾಲಿಬನ ವರ್ಷಾಶನ ಮತ್ತೆ ದೊರೆಯಲಾರಂಭಿಸಿ, 1863 ರಿಂದ ರಾಜ ದರಬಾರ್‌ಗಳಲ್ಲಿ ಭಾಗವಹಿಸುವ ಗೌರವ ಮತ್ತೆ ಪ್ರಾಪ್ತವಾದಾಗ ಅವನಲ್ಲಿ ಇನ್ನೂ ಹೆಚ್ಚಿನ ಮಾನ-ಸಮ್ಮಾನಗಳ ಆಕಾಂಕ್ಷೆ ಹುಟ್ಟಿಕೊಂಡಿತು. ತನ್ನನ್ನು ಇಂಗ್ಲೆಂಡಿನ ರಾಣಿಯ ಆಸ್ಥಾನ ಕವಿಯಾಗಿ ನಿಯಮಿಸಬೇಕೆಂದೂ ತನ್ನ ದಸ್ತಂಬೂ ಗ್ರಂಥವನ್ನು ಸರಕಾರದ ಪರವಾಗಿ ಪ್ರಕಟಿಸಬೇಕೆಂದೂ ನಿವೇದನೆ ಸಲ್ಲಿಸಿದ. ಆದರೆ ಅವನ ಎರಡೂ ಬಿನ್ನಹಗಳಿಗೆ ಮನ್ನಣೆ ದೊರೆಯಲಿಲ್ಲ. ಬ್ರಿಟಿಷ್ ಅಧಿಕಾರಿಗಳ ಈ ತೀರ್ಮಾನದಲ್ಲಿ ಸಮಕಾಲೀನರ ಅಸೂಯೆಯೂ ಪಾತ್ರವಾಡಿರಬೇಕು. ಹಾಗೆ ನೋಡಿದರೆ, ಇಂಗ್ಲೆಂಡಿನ ಗೃಹಖಾತೆಯ ಅಧಿಕಾರಿಗಳಿಂದ ಬಂದ ಉತ್ತರ ತುಂಬ ಉತ್ತೇಜನಕಾರಿಯಾಗಿತ್ತಷ್ಟೇ ಅಲ್ಲದೆ ಅವನಿಗೆ ಅನುಕೂಲಕರವೂ ಆಗಿತ್ತು. ಗಾಲಿಬನನ್ನು ರಾಣಿಯ ಆಸ್ಥಾನ ಕವಿಯೆಂದು ನಿಯಮಿಸುವುದು ಸಾಧ್ಯವಿಲ್ಲವಾದರೂ, ಗವರ್ನರ್ ಜನರಲ್ ಅವನನ್ನು ತನ್ನ ದರಬಾರಿನ ರಾಜಕವಿ ಎಂದು ನಿಯಮಿಸಲು ತಮ್ಮ ಅಭ್ಯಂತರವೇನಿಲ್ಲ ಎಂದು ಅವರು ತಮ್ಮ ಉತ್ತರದಲ್ಲಿ ಬರೆದಿದ್ದರು. ತರುವಾಯ ಗವರ್ನರ್ ಜನರಲ್-ಇನ್-ಕೌನ್ಸಿಲ್ ಸಿಪಾಯರ ದಂಗೆಯ ಕಾಲದ ಗಾಲಿಬನ ವರ್ತನೆ ಹೇಗಿತ್ತೆಂಬ ಬಗ್ಗೆ ವರದಿ ಕೇಳಿದ, ಸರಿ. ಈ ಚವಕಸಿಯ ಸಂದರ್ಭದಲ್ಲಿ, ಬಹಾದ್ದುರ್ ಶಹನಿಗೆ ಗಾಲಿಬ್ ಬರೆದು ಕೊಟ್ಟನೆಂದು ಭಾವಿಸಲಾದ 'ಸಿಕ್ಕಾ' ಲೇಖನದ ಪ್ರಸ್ತಾಪ ಬಂದೇ ಬಿಟ್ಟಿತು.

ತತ್ಪರಿಣಾಮವಾಗಿ, ಗಾಲಿಬ್ ಪ್ರತ್ಯಕ್ಷದಲ್ಲಿ ಬ್ರಿಟಿಷರ ವಿರೋಧಿಯಾಗಿರದಿದ್ದರೂ, ದಂಗೆಗಾರರೊಡನೆ ಸಹಾನುಭೂತಿಪರನಾಗಿದ್ದನೆಂಬ ತೀರ್ಮಾನಕ್ಕೆ ಬರಲಾಯಿತು.

ಆದರಿಂದಾಗಿ ಅವನು ಗವ್ಹರ್ನರ್ ಜನರಲ್‌ನಿಂದ ರಾಜಕವಿಯ ಹುದ್ದೆಗೆ ನಿಯುಕ್ತಿ ಹೊಂದಬಹುದೆಂದಿರಿಸಿಕೊಂಡ ನಿರೀಕ್ಷೆಯೂ ನೀರುಪಾಲಾಯಿತು. ಅಷ್ಟಾದರೂ, ಗಾಲಿಬನ ಎರಡೂ ಬಿನ್ನಹಗಳ ಬಗ್ಗೆ ತನ್ನ ಪಾತಳಿಯ ಮೇಲೆ ಸೂಕ್ತ ಕ್ರಮಕೈಕೊಂಡು ಆ ಬಗ್ಗೆ ವರದಿ ಕಳಿಸಬೇಕೆಂದು ಪಂಜಾಬದ ಲೆಫ್ಟಿನೆಂಟ್ ಗವ್ಹರ್ನರ್‌ನಿಗೆ ಆದೇಶ ಕಳಿಸಲಾಯಿತು.

# ಸಾಹಿತ್ಯಿಕ ಜನಪ್ರಿಯತೆ

ಗಾಲಿಬನ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಸುಧಾರಿಸದೆ, ಅವನು ತನ್ನ ಹಾಗು ತನ್ನ ಪರಿವಾರದ ಹೊಟ್ಟೆ-ಬಟ್ಟೆಗಾಗಿ ಹೋರಾಡುವುದು ತಪ್ಪಿರದಿದ್ದರೂ, ಸಾಹಿತ್ಯ ಪ್ರಪಂಚದಲ್ಲಿ ಮಾತ್ರ ಅವನ ಗುಣಗೌರವ ಹೆಚ್ಚುತ್ತಲೇ ನಡೆದಿತ್ತು. 1857ರ ರಾಜಕೀಯ ಬಿರುಗಾಳಿಗಿಂತ ಮೊದಲೇ ಅವನ ಉರ್ದು ಹಾಗು ಪರ್ಶಿಯನ್ ಕಾವ್ಯಕೃತಿಗಳು ಪ್ರಕಟಗೊಂಡಿದ್ದವು. ಅವನ ಉರ್ದು ದೀವಾನ್ 1841 ರಲ್ಲೊಮ್ಮೆ ಹಾಗು 1847 ರಲ್ಲೊಮ್ಮೆ - ಹೀಗೆ ಎರಡು ಸಲ ಪ್ರಕಟವಾಗಿತ್ತು. ಅವನ ಪರ್ಶಿಯನ್ ದೀವಾನ್ 1845 ರಲ್ಲಿ ಒಂದು ಸಲ ಪ್ರಕಟವಾಗಿತ್ತು. ಅವನ ಕಾವ್ಯಕೃತಿಗಳ ಹಳೆಯ ಆವೃತ್ತಿಗಳು ಮುಗಿದು ಹೋಗಿದ್ದರಿಂದ ಕಾವ್ಯಪ್ರೇಮಿಗಳು ಅವುಗಳ ಹೊಸ ಆವೃತ್ತಿಗಳಿಗಾಗಿ ಕಾತರತೆಯಿಂದ ಕಾಯುತ್ತಿದ್ದರು. ಅವನ ಉರ್ದು ದೀವಾನ್ ಗೆ ವಿಪರೀತ ಬೇಡಿಕೆಯಿತ್ತು. ಆದರೆ ಸ್ವಯಂ ಗಾಲಿಬನ ಬಳಿಗೂ ಅದರ ಪ್ರತಿ ಇರಲಿಲ್ಲ. ಹೇಗೋ ಪ್ರಯತ್ನಿಸಿ ಒಂದು ಪ್ರತಿ ದೊರಕಿಸಿ ಅದನ್ನು ಮರುಮುದ್ರಣಕ್ಕೆ ಕಳಿಸಲು ಅಣಿಗೊಳಿಸಿದ. 1861 ರಲ್ಲಿ ಅದು ಪ್ರಕಟವಾಯಿತು. ಆದರೆ ಈ ಆವೃತ್ತಿಯು ಒಟ್ಟಿಂದ ತೃಪ್ತಿಕರವಾಗಿರಲಿಲ್ಲ. ಆದರ ಹೊರಾವರಣ ಹಾಗು ಅಕ್ಷರಲೇಖನದ ಬಗ್ಗೆ ಯಾವ ದಕ್ಷತೆಯನ್ನೇ ವಹಿಸಿರಲಿಲ್ಲ. ಅದಕ್ಕೆಲ್ಲ ಕಲಶವಿಡುವಂತೆ ಮುದ್ರಾರಾಕ್ಷಸನ ಹಾವಳಿ ಬೇರೆ. ಇದನ್ನೆಲ್ಲ ನೋಡಿ ಕಸಿವಿಸಿಗೊಂಡು, ಒಂದು ಪ್ರತಿಯನ್ನು ಆಮೂಲಾಗ್ರವಾಗಿ ತಿದ್ದಿ ಕಾನಪುರದಲ್ಲಿದ್ದ ನಿರಝಾಮೀ ಪ್ರೆಸ್ ಎಂಬ ಪ್ರಖ್ಯಾತ ಮುದ್ರಣಾಲಯಕ್ಕೆ ಕಳಿಸಿ ಕೊಟ್ಟ. ಮರುವರ್ಷ - ಅಂದರೆ 1862 ರಲ್ಲಿ - ಅದು ಅಲ್ಲಿಂದ ಪ್ರಕಟಗೊಂಡಿತು. ಅದೇ ವರ್ಷ (1862) ದೆಹಲಿಗೆ ಭೇಟಿ ನೀಡಿದ ಲಖನೌದ ಪ್ರಸಿದ್ಧ ಪ್ರಕಾಶಕ ಮುನ್ಸಿ ನವಲ್ ಕಿಶೋರ್ ಗಾಲಿಬನ ಪರ್ಶಿಯನ್ ದೀವಾನ್ ದ ಹೊಸ ಆವೃತ್ತಿಯನ್ನು ಪ್ರಕಟಿಸಲು ಅವನ ಅನುಮತಿ ಕೇಳಿದ. ಗಾಲಿಬ್ ತನ್ನ ಕೃತಿಗಳನ್ನು ತನ್ನ ಬಳಿ ಜಪ್ಪಿಸಿ ಇಟ್ಟವನೇ ಅಲ್ಲ. ಅವನ ಕೃತಿಗಳನ್ನು ಅವನಿಬ್ಬರು ಮಿತ್ರರಾದ ನವಾಬ್ ಜಿಯಾವುದ್ದೀನ್ ಅಹಮ್ಮದ್ ಖಾನ್ ಮತ್ತು ನಾಜಿರ್ ಹುಸೇನ್ ಮಿರಝಾ ಎಂಬುವರು ಸುರಕ್ಷಿತವಾಗಿ ಕಾದಿಟ್ಟಿದ್ದರು. ಒಬ್ಬನಲ್ಲಿ ಪರ್ಶಿಯನ್ ಕೃತಿಗಳಿದ್ದರೆ, ಮತ್ತೊಬ್ಬನಲ್ಲಿ ಉರ್ದು ಕೃತಿಗಳು ಸುರಕ್ಷಿತವಾಗಿ ಇಡಲ್ಪಟ್ಟಿದ್ದವು. ಗಾಲಿಬ್ ಮುನ್ಸಿ ನವಲ್ ಕಿಶೋರನ ಬಿನ್ನಹವನ್ನು ಮನ್ನಿಸಿ ಅವನನ್ನು ನವಾಬ್ ಜಿಯಾವುದ್ದೀನ್ ಅಹಮ್ಮದ್ ಖಾನ್‌ನ ಬಳಿ ಕಳಿಸಿದ. ಮುನ್ಸಿ ನವಲ್ ಕಿಶೋರ್ ಗಾಲಿಬನ

ಹಸ್ತಪ್ರತಿಯನ್ನು ಪಡೆದುಕೊಂಡು ಲಖನೌಗೆ ಮರಳಿದ. ಆದರೆ, ಕಾರಣಾಂತರಗಳಿಂದ ಅದರ ಮುದ್ರಣಕಾರ್ಯ ಮಾತ್ರ ತ್ವರಿತಗತಿಯಿಂದ ನಡೆಯಲಿಲ್ಲ. ಆ ಗ್ರಂಥ ಸುಮಾರು ಒಂದು ವರ್ಷದ ನಂತರ, ಅಂದರೆ 1863 ರ ಮಧ್ಯಕಾಲದಲ್ಲಿ, ಮುದ್ರಣಾಲಯದಿಂದ ಬೆಳಕಿಗೆ ಬಂತು.

ಅವನ ಉರ್ದು ಮತ್ತು ಪರ್ಶಿಯನ್ ಕೃತಿಗಳು ಅನೇಕ ಆವೃತ್ತಿಗಳಾಗಿ ಪ್ರಕಟವಾದದ್ದೇ ಅವನ ಸಾಹಿತ್ಯಿಕ ಜನಪ್ರಿಯತೆಗೆ ಸಾಕ್ಷಿಯಾಗಿತ್ತು. ಮೂರು ವರ್ಷಗಳಲ್ಲಿ ಅವನ ಕೃತಿಗಳು ನಾಲ್ಕು ಪುನರ್ಮುದ್ರಣ ಕಂಡದ್ದು ಅವನು ಗಳಿಸಿದ ಜನಾನುರಾಗವನ್ನೇ ಸೂಚಿಸುತ್ತದೆ. ರಸಿಕರು ಅವನ ಕೃತಿಗಳಿಗಾಗಿ ಆತುರತೆಯಿಂದ ಕಾಯುತ್ತಿದ್ದರು.

## ರಾಮಪುರಕ್ಕೆ ಭೇಟಿ

ರಾಮಪುರದ ನವಾಬ್ ಯೂಸುಫ್ ಅಲಿ ಖಾನ್ 1857 ರಲ್ಲೇ ಗಾಲಿಬನ ಶಿಷ್ಯತ್ವ ಸ್ವೀಕರಿಸಿದ್ದ. ಅವನ ಆರ್ಥಿಕ ಸ್ಥಿತಿ ಕೆಡುತ್ತಲೇ ಹೊರಟಿದ್ದನ್ನು ಗಮನಿಸಿ ಅವನು ರಾಮಪುರಕ್ಕೆ ಬರಬೇಕೆಂದು ನವಾಬ್ ವಿನಂತಿಸಿಕೊಂಡಿದ್ದ. ಆ ಕಾಲಕ್ಕೆ ಪರಿಸ್ಥಿತಿ ಬೇಗ ಸುಧಾರಿಸಬಹುದೆಂದು ತನಗೆ ಮತ್ತೆ ಮೊದಲಿನ ಸರಕಾರೀ ಸ್ಥಾನ-ಮಾನಗಳು ಮರಳಿ ದೊರೆಯಬಹುದೆಂದೂ ಗಾಲಿಬ್ ನಿರೀಕ್ಷಿಸುತ್ತ ಕುಳಿತಿದ್ದ. ಅಂತೆಯೇ, ಬ್ರಿಟಿಷ್ ಅಧಿಕಾರಿಗಳೊಡನೆ ತನ್ನ ಸ್ನೇಹ-ಸಂಬಂಧ ಸುಧಾರಿಸುತ್ತಲೇ ತಾನು ರಾಮಪುರಕ್ಕೆ ಅಗತ್ಯ ಬರುವುದಾಗಿ ಗಾಲಿಬ್ ನವಾಬನಿಗೆ ಸಂದೇಶ ಕಳಿಸಿದ. ಆದರೆ, ಅವನ ನಿರೀಕ್ಷೆ ಸಫಲವಾಗಲಿಲ್ಲ. ಅವನ ಅಪೇಕ್ಷೆಗಳ ಬಗ್ಗೆ ಬ್ರಿಟಿಷ್ ಅಧಿಕಾರಿಗಳು ಉತ್ಸಾಹದ ಪ್ರತಿಕ್ರಿಯೆ ತೋರಿಸಲಿಲ್ಲ. ಈ ಮಧ್ಯೆ ರಾಮಪುರದ ಹೊರತಾಗಿ ತನ್ನ ಆದಾಯದ ಮಾರ್ಗಗಳೆಲ್ಲ ಕಟ್ಟಾಗಿದ್ದವು. ಅಂದ ಮೇಲೆ ರಾಮಪುರದ ನವಾಬನ ಆಮಂತ್ರಣ ಸ್ವೀಕರಿಸಿ ರಾಮಪುರಕ್ಕೇ ಹೋಗಿ ಬಿಡುವುದೊಳಿತೆಂದು ಗಾಲಿಬ್ ಭಾವಿಸಿದ. ದೆಹಲಿಯ ಜೀವನವೂ ಮೊದಲಿನಷ್ಟು ಸುರಕ್ಷಿತವೆನಿಸುವಂತಿರಲಿಲ್ಲ. ಎರಡನೇ ಬಹಾದ್ದುರ್ ಶಹನ ದರಬಾರದೊಡನೆ ಒಂದಿಲ್ಲೊಂದು ಬಗೆಯ ಸಂಬಂಧ ಇರಿಸಿಕೊಂಡ ಅಥವಾ ಅವನ ಸಿಬ್ಬಂದಿಯಲ್ಲಿ ಸೇರಿಕೊಂಡ ಅನೇಕರನ್ನು ಸೆರೆ ಹಿಡಿದು ಮೊಕದ್ದಮೆಗಳನ್ನು ಹೂಡಲಾಗಿತ್ತು. ಈ ಕುತ್ತಿನಿಂದ ಪಾರಾದವರನ್ನು ಬೇರೆ ವಿಧದಿಂದ ಪೀಡಿಸಲಾಗುತ್ತಿತ್ತು. ಗಾಲಿಬ್ ಕೂಡ ಬಹಾದ್ದುರ್ ಶಹನ ಹೊಸ ನಾಣ್ಯಕ್ಕಾಗಿ 'ಸಿಕ್ಕಾ' ಬರೆದು ಕೊಟ್ಟವನೆಂಬ ಅನುಮಾನದ ಆರೋಪವೊಂದು ಇದ್ದೇ ಇತ್ತು. ಒಟ್ಟಿನಲ್ಲಿ ದೆಹಲಿಯ ಈ ವಾತಾವರಣದಿಂದ ದೂರವಿರುವುದೇ ವಾಸಿಯೆಂದು ಗಾಲಿಬನಿಗೆ ಅನಿಸಿರಲು ಸಾಕು. ಅಷ್ಟಲ್ಲದೆ, ತಾನು ರಾಮಪುರಕ್ಕೆ ಹೊರಡಬೇಕೆಂದು ಮಾಡಿದ ನಿರ್ಣಯದ ಹಿನ್ನೆಲೆಯಲ್ಲಿ ಇನ್ನೆರಡು ಕಾರಣಗಳ ಪ್ರಭಾವವೂ ಇದ್ದಿರಲಿಕ್ಕೆ ಸಾಕು. ಮೊದಲನೆಯದೆಂದರೆ - ರಾಮಪುರದ ನವಾಬನಿಂದ ತನಗೆ ನಿಯಮಿತವಾದ ಮಾಸಾಶನ ದೊರೆಯುತ್ತಿದ್ದುದು. ಎರಡನೆಯದಾಗಿ, ಪ್ರಾಯಶಃ ಬ್ರಿಟಿಷರೊಡನೆ ತನ್ನ

ಸ್ನೇಹ-ಸಂಬಂಧ ಮತ್ತೆ ಕುದುರಬೇಕೆಂಬ ತನ್ನ ಅಪೇಕ್ಷೆ ಈಡೇರಲು ರಾಮಪುರ ನವಾಬನ ಪ್ರಭಾವವೇ ಕೆಲಸಕ್ಕೆ ಬಂದರೂ ಬರಬಹುದೆಂಬ ಭಾವನೆ. ದಂಗೆಯ ಕಾಲದಲ್ಲಿ ರಾಮಪುರದ ನವಾಬ್ ಬ್ರಿಟಿಷರಿಂದ ದೂರ ಸರಿಯದೆ ಅವರಿಗೆ ಬೆಂಗಾವಲಾಗಿಯೇ ನಿಂತಿದ್ದ. ಅವರಿಗೆ ಧನ ಸಹಾಯವನ್ನೂ ಮಾಡಿದ್ದ; ಸೈನಿಕ ಸಹಾಯವನ್ನೂ ನೀಡಿದ್ದ. ಆದ್ದರಿಂದ ಬ್ರಿಟಿಷ್ ಅಧಿಕಾರಿಗಳು ಅವನಿಗೆ ಉಪಕೃತರಾಗಿದ್ದರಷ್ಟೇ ಅಲ್ಲದೆ ಉತ್ತರ ಪ್ರದೇಶದಲ್ಲಿ ರಾಮಪುರಕ್ಕೆ ಹೊಂದಿಕೊಂಡಿದ್ದ ಮತ್ತೆ ಕೆಲವು ಜಿಲ್ಲೆಗಳನ್ನು ಅವನಿಗೆ ಉಂಬಳಿಯಾಗಿ ನೀಡಿದ್ದರು. ಇದೆಲ್ಲ ಗಾಲಿಬನಿಗೆ ಗೊತ್ತಿದ್ದ ಸಂಗತಿಯೇ. ಅಂತೆಯೇ ತನ್ನ ಕಷ್ಟ ಕಾಲದಲ್ಲಿ ರಾಮಪುರ ನವಾಬನ ಪ್ರಭಾವವನ್ನು ಬಳಸಿಕೊಳ್ಳುವುದೇ ತನಗುಳಿದ ಯೋಗ್ಯ ಉಪಾಯವೆಂದು ಗಾಲಿಬ್ ಭಾವಿಸಿರಬೇಕು. ಅಂತೂ ಆತ 1860 ರ ಜನವರಿಯಲ್ಲಿ ರಾಮಪುರಕ್ಕೆ ಪ್ರಯಾಣ ಬೆಳೆಸಿದ.

ಗಾಲಿಬನಿಗೆ ತನ್ನದೆಂಬುವ ಜೀವಂತ ಮಗುವೇ ಇರಲಿಲ್ಲ. ಅವನಿಗೆ ಒಟ್ಟಿಗೆ ಏಳು ಮಕ್ಕಳಾಗಿದ್ದುದು ನಿಜ. ಆದರೆ ಅವುಗಳಲ್ಲೊಂದೂ ಒಂದೂವರೆ ವರ್ಷಕ್ಕಿಂತ ಹೆಚ್ಚಿಗೆ ಬದುಕದೆ ಎಳೆತನದಲ್ಲೇ ತೀರಿ ಹೋಗಿದ್ದವು. ಮೊದಲು ಆತ ತನ್ನ ಮಡದಿಯ ಕಕ್ಕನ ಮಗ ಜೈನುಲ್ ಅಬಿದೀನ್ ಖಾನ್‌ನನ್ನು ದತ್ತು ತೆಗೆದುಕೊಂಡಿದ್ದ. ಜೈನುಲ್ ಒಳ್ಳೆಯ ಕವಿಯಾಗಿದ್ದು 'ಆರಾಫ್' ಎಂಬ ಕಾವ್ಯನಾಮದಲ್ಲಿ ಬರೆಯುತ್ತಿದ್ದ. 1852 ರಲ್ಲಿ ಕ್ಷಯರೋಗದಿಂದಾಗಿ, ತನ್ನೆರಡು ಎಳೆಯ ಬಾಲಕರನ್ನು ಹಿಂದೆ ಬಿಟ್ಟು ಈ ಯುವಕನೂ ತೀರಿಕೊಂಡ. ಈ ಇಬ್ಬರು ಬಾಲಕರಲ್ಲಿ ಹಿರಿಯವನಾದ ಬಾಖಿರ್ ಅಲಿ ಖಾನ್‌ನನ್ನು ಗಾಲಿಬನ ಮಡದಿ ತನ್ನ ಮನೆಗೆ ಕರೆದು ತಂದಳು. ಕಿರಿಯವ ಕೇವಲ ಎರಡು ವರ್ಷದವನಿದ್ದು, ಅವನ ಅಜ್ಜಿಯ ಅಂದರೆ ಗಾಲಿಬನ ಮಡದಿಯ ಸೋದರಿಯ ಮನೆಯಲ್ಲೇ ಉಳಿದ. ಅವನ ಹೆಸರು ಹುಸೇನ್ ಅಲಿ ಖಾನ್. ದುರ್ದೈವದಿಂದ ಅವನ ಅಜ್ಜಿಯೂ ಸ್ವಲ್ಪ ದಿನಗಳಲ್ಲಿಯೇ ತೀರಿಕೊಂಡಳು. ಹೀಗಾಗಿ ಆ ಕಿರಿಯವನಿಗೂ ಗಾಲಿಬನೇ ಆಶ್ರಯ ಕೊಡಬೇಕಾಯಿತು. ಇವೆರಡೂ ಮಕ್ಕಳನ್ನು ಗಾಲಿಬನ ಮಡದಿ ತನ್ನ ಮೊಮ್ಮಕ್ಕಳಂತೆ ಅಕ್ಕರೆಯಿಂದಲೇ ನೋಡಿಕೊಂಡಳು. ಗಾಲಿಬ್ ರಾಮಪುರಕ್ಕೆ ಹೋದಾಗ ಈ ಎರಡು ಮಕ್ಕಳು ಜೊತೆಗಿದ್ದವು. ಆತ ರಾಮಪುರದಲ್ಲಿ ಇದ್ದದ್ದು ಸುಮಾರು ಎರಡು ತಿಂಗಳು. ದೆಹಲಿಗೆ ಮರಳಿ ಬರಬೇಕೆಂಬ ಆಕರ್ಷಣೆಯೇನಿರಲಿಲ್ಲ. ಮೇಲಾಗಿ ರಾಮಪುರದಲ್ಲಿ ಅವನಿಗೆ ಸಕಲ ಸೌಕರ್ಯ-ಸೌಲಭ್ಯಗಳೂ ಇದ್ದುವು. ಅವನು ರಾಮಪುರದಲ್ಲೇ ಇನ್ನು ಕೆಲ ಕಾಲ ನಿಲ್ಲಬಹುದಿತ್ತು. ಆದರೂ ಆ ಎಳೆಯ ಮಕ್ಕಳಿಗೆ ರಾಮಪುರದ ವಾತಾವರಣ ಒಗ್ಗಲಿಲ್ಲವಾದ್ದರಿಂದ ಆತ ಮತ್ತೆ ದೆಹಲಿಯ ದಾರಿ ತುಳಿಯಬೇಕಾಯಿತು.

## ಮರಳಿ ದೊರೆತ ಸ್ಥಾನಮಾನಗಳು

ಗಾಲಿಬ್ ರಾಮಪುರದಲ್ಲಿದ್ದಾಗಲೇ ರಾಮಪುರದ ನವಾಬ್ ಗಾಲಿಬನ ಪರವಾಗಿ ಬ್ರಿಟಿಷ್

ಅಧಿಕಾರಿಗಳೊಡನೆ ಮಧ್ಯಸ್ಥಿಕೆ ಮಾಡಿದ. ತತ್ಪರಿಣಾಮವಾಗಿಯೇ ಈ ಮೊದಲು ಹೇಳಿದಂತೆ, 1860 ರ ಮೇ ತಿಂಗಳಲ್ಲಿ ಮತ್ತೆ ಅವನ ವರ್ಷಾಶನ ಆರಂಭಗೊಂಡಿತು.

ಈ 750 ರೂಪಾಯಿಗಳ ಸಣ್ಣ ಪ್ರಮಾಣದ ವರ್ಷಾಶನಕ್ಕಾಗಿ ಗಾಲಿಬ್ ಇಷ್ಟೇಕೆ ಪೇಚಾಡಬೇಕೆಂದು ಯಾರಿಗಾದರೂ ಅಚ್ಚರಿಯಾಗಬಹುದು. ಅದಕ್ಕೆ ಮುಖ್ಯ ಕಾರಣವೆಂದರೆ ಅದೊಂದೇ ಅವನ ಖಾಯಂ ಹಾಗು ನಿಯಮಿತ ಸ್ವರೂಪದ ಆದಾಯವಾಗಿತ್ತೆಂಬುದು. ಇನ್ನಿತರ ಆದಾಯ ಎಂದರೊಂದು ಮುಗಿಲ ಮಲ್ಲಿಗೆಯೇ ಸರಿ; ಕೈಗೆ ಸಿಕ್ಕರೆ ಸಿಕ್ಕಿತು; ಇಲ್ಲವಾದರಿಲ್ಲ. ಯಾವುದಾದರೂ ಯಾವಾಗಲಾದರೂ ಬಂದರೆ ನಡೆದೀತು ಎಂಬಂಥ ಭಾಗ್ಯಲಕ್ಷ್ಮಿಯನ್ನು ನಂಬಿಕೊಂಡು, ನೆಚ್ಚಿಕೊಂಡು ಬದುಕುವುದು ಸಾಧ್ಯವೇ! ತನ್ನ ಜೀವನದಲ್ಲಿ ಏನಾದರೊಂದು ಯೋಜನೆ ಹಾಕಿಕೊಂಡು ಅದನ್ನು ಅನುಸರಿಸಬೇಕಾದರೆ ಮುಖ್ಯ ಆಧಾರವೊಂದು ಬೇಕೇ ಬೇಕು. ಗಾಲಿಬನ ವಿಷಯದಲ್ಲೇ ಹೇಳುವುದಾದರೆ, ಬಹು ದಿನಗಳಿಂದ ಈ ವರ್ಷಾಶನವೇ ಅವನ ವಿಶ್ವಸನೀಯ ಆದಾಯವಾಗಿತ್ತು. ಅದಕ್ಕೂ ಮಿಗಿಲಾಗಿ ಈ ವರ್ಷಾಶನದಿಂದಾಗಿ ಅವನ ಮಿತ್ರ ಸಮುದಾಯದಲ್ಲಿ ಅವನಿಗೆ ಹೆಚ್ಚಿನ ಮರ್ಯಾದೆ ದೊರೆಯುವಂತಾಗಿತ್ತು. ಅಂತೆಯೇ, ಅದು ನಿಂತು ಹೋದಾಗ ಅವನಿಗಾಗದ ಜನ ಗುಸುಗುಸು ಮಾತಾಡಿಕೊಳ್ಳುವುದಕ್ಕೊಂದು ನಿಮಿತ್ತ ದೊರೆತಂತೆಯೂ ಆಗಿರಬೇಕು. ಆ ವರ್ಷಾಶನ ಜಾರಿಯಲ್ಲಿದ್ದಾಗ ಅವನು ನೇರವಾಗಿ ಬೇಕಾದ ಬ್ರಿಟಿಷ್ ಅಧಿಕಾರಿಯನ್ನು ಕಂಡು ಬರುವ ಸ್ವಾತಂತ್ರ್ಯವಿತ್ತು. ರಾಜ ದರಬಾರ್‌ಗಳಲ್ಲಿ ಗವ್ಹರ್ನರ್ ಜನರಲ್‌ನಾಗಲಿ, ಲೆಫ್ಟಿನೆಂಟ್ ಗವ್ಹರ್ನರ್‌ನಾಗಲಿ - ಯಾರು ಅಧ್ಯಕ್ಷ ಸ್ಥಾನದಲ್ಲಿದ್ದರೂ - ಗಾಲಿಬನಿಗೆ ಅಧ್ಯಕ್ಷರ ಬಲಬದಿಯ ಹತ್ತನೆಯ ಆಸನ ಮೀಸಲಾಗಿರುತ್ತಿತ್ತು. ವರ್ಷಾಶನದ ರಕಮು ಚಿಕ್ಕದಾದರೂ, ಅದರಿಂದಾಗಿ ಅವನಿಗೆ ದೊರೆತಿದ್ದ ಈ ರಾಜಮರ್ಯಾದೆ ಬಲು ದೊಡ್ಡದಾಗಿದ್ದು ಅವನ ಸಮಕಾಲೀನರ ಅಸೂಯೆಗೂ ಕಾರಣವಾಗಿರಲು ಸಾಕು. ಇದರ ಮೇಲಿಂದಲೇ ಅಷ್ಟು ಸಣ್ಣ ಪ್ರಮಾಣದ ವರ್ಷಾಶನ ಹಾಗು ತನ್ಮೂಲಕ ದೊರೆಯುವ ರಾಜಮರ್ಯಾದೆಗಳಿಗಾಗಿ ಅವನು ಅಷ್ಟೇಕೆ ಪೇಚಾಡುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ.

ಭಾರತೀಯ ಸೇನೆ ಮೀರತ್‌ನಿಂದ ಹೊರಟು 1857 ರ ಮೇ 11 ರಂದು ದೆಹಲಿ ತಲುಪಿತು. ಅದಕ್ಕೂ ಮುನ್ನ ಅಂದರೆ ಎಪ್ರಿಲ್ ತಿಂಗಳಲ್ಲಿ ಗಾಲಿಬನಿಗೆ ವರ್ಷಾಶನದ ಹಣ ತಲುಪಿತ್ತು. ಅದಾದ ನಂತರ ಈಗ ವರ್ಷಕ್ಕೆ 750 ರೂ.ಗಳಂತೆ ಮೂರು ವರ್ಷಗಳ - ಅಂದರೆ 1857 ರ ಮೇ ತಿಂಗಳಿಂದ 1860 ರ ಎಪ್ರಿಲ್ ತಿಂಗಳ ವರೆಗಿನ ಬಾಕಿ ರಕಮು 2250 ರೂ. 1860 ರ ಮೇ ತಿಂಗಳಲ್ಲಿ ಕೈಗೆ ಬಂತು. ಈ ಮೊದಲು 1859 ರ ಮಾರ್ಚ್ ತಿಂಗಳಲ್ಲಿ ಅವನಿಗೆ ಕೊಟ್ಟಿದ್ದ 100 ರೂ. ಗಳನ್ನು ಅದರಲ್ಲಿ ವಜಾ ಮಾಡಲಾಯಿತು. ಹೀಗೆ ಅವನ ಕೈಗೆ ಬಂದ ಒಟ್ಟು ರಕಮು 2150 ರೂ.ಗಳಲ್ಲಿ 150 ರೂ.ಗಳನ್ನು ಕಚೇರಿಯೊಳಗಿನ ಕೆಳ ತರಗತಿಯ ಸಿಬ್ಬಂದಿಗೆ ಕಾಣಿಕೆಯೆಂದು ಕೊಟ್ಟನು. ಇನ್ನುಳಿದದ್ದು ಕೇವಲ 2000 ರೂ. ಅದರೊಳಗಿಂದ 1500 ರೂ. ಗಳನ್ನು ತನ್ನ ಕಷ್ಟಕಾಲದಲ್ಲಿ ನೆರವಾಗಿದ್ದ ಹಿತೈಷಿಯೊಬ್ಬನಿಗೆ ಕೊಡುವುದಿತ್ತು. ಅದೇ ಕಾಲದಲ್ಲಿ ನಿತ್ಯ ಬಳಕೆಯ ಸರಕು - ಸಾಮಾನುಗಳನ್ನು ಪೂರೈಸಿದವರಿಗೂ 1100 ರೂ.

ಗಳಷ್ಟು ಬಾಕಿ ಕೊಡುವುದಿತ್ತು. ಅರ್ಥಾತ್ ಅವನ ಕೈಗೆ ವರ್ಷಾಶನದ ಬಾಕಿ ಹಣ ಅವನ ಸಾಲ ಹಾಗು ಉದ್ದರಿ ಲೆಕ್ಕಗಳನ್ನು ತೀರಿಸಲಿಕ್ಕೂ ಸಾಲುವಂತಿರಲಿಲ್ಲ. ಆದರೂ ತನ್ನ ವರ್ಷಾಶನ ಮತ್ತೆ ಆರಂಭಗೊಂಡ ಬಗ್ಗೆ ಆತನಿಗೆ ಆನಂದವೇ ಆಗಿತ್ತು. ಅವನ ಹೊಸ ಆಕಾಂಕ್ಷೆಗಳೂ ಚೇತರಿಸಿಕೊಂಡಿದ್ದವು. ಮೊದಲು ಶಿಥಿಲಗೊಳ್ಳುತ್ತ ನಡೆದಿದ್ದ ಬ್ರಿಟಿಷ್ ಅಧಿಕಾರಿಗಳ ಸ್ನೇಹ-ಸಂಬಂಧ ಮತ್ತೆ ಯಥಾಸ್ಥಿತಿಗೆ ಬರಬಹುದೆಂಬ ಭಾವನೆಯೂ ಬೆಳೆಯಿತು. ಅಂತಯೇ ತನ್ನ 'ಗೌರವದ ಪೋಷಾಕು ಮತ್ತು ದರಬಾರ್‌ಗಳಲ್ಲಿ ಉಪಸ್ಥಿತಿಯ ಸಮ್ಮಾನಕ್ಕಾಗಿ ಮರಳಿ ಯತ್ನವ ನಡೆಸಿದ. ಈ ಮೊದಲೇ ಹೇಳಿದಂತೆ ಅವನು ತನ್ನ ವರ್ಷಾಶನದ ಬೇಡಿಕೆಯೊಂದಿಗೆ 1823 ರಲ್ಲಿ ಕಲ್ಕತ್ತೆಗೆ ಹೋದಾಗ ವಿಲಿಯಂ ಬೆಂಟಿಂಕ್‌ನ ಕಾಲದಲ್ಲಿ ಅವನಿಗೆ ರಾಜ ದರಬಾರ್‌ಗಳಲ್ಲಿ ಭಾಗವಹಿಸುವ ಗೌರವ ಪ್ರಾಪ್ತವಾಗಿತ್ತು. ಆದರ ಅನೇಕ ದಿನಗಳ ನಂತರ ಅವನಿಗೆ ರಾಜಗೌರವದ ಪೋಷಾಕು ನೀಡಲಾಗಿತ್ತು. ಅದರಲ್ಲಿ ಏಳು ಪ್ರಕಾರದ ಸಂಪೂರ್ಣ ಉದ್ದಳತೆಯುಳ್ಳ ಥಾನುಗಳು, ಒಂದು ರತ್ನಖಚಿತ ಸಿರಪೇಚು (ಪೇಟ) ಹಾಗು ಒಂದು ಮುತ್ತಿನ ಹಾರ-ಇವಿಷ್ಟಿದ್ದವು. ಅವನು ದರಬಾರ್‌ಗಳಿಗೆ ಹೋದಾಗ ದರಬಾರ್‌ನ ಅಧ್ಯಕ್ಷೀಯ ಅಧಿಕಾರಿಗೆ ರೋಖ್ ಹಣದ ಕಾಣಿಕೆ ಸಲ್ಲಿಸುವ ಅಗತ್ಯವಿರಲಿಲ್ಲ. ಅದರ ಬದಲಾಗಿ ಅವನೊಂದು ಪ್ರಶಂಶಾ ಗೀತವನ್ನು ಪ್ರಸ್ತುತ ಪಡಿಸುವುದು ವಾಡಿಕೆಯಾಗಿತ್ತು.

ಇಷ್ಟೆಲ್ಲ ಸ್ಥಾನಮಾನಗಳು ಮರಳಿ ದೊರೆತರೂ ಅವನ ಅಭಾವ ಸ್ಥಿತಿಯೇನೂ ಅವನಿಂದ ದೂರಾಗಲಿಲ್ಲ. ಅದರಿಂದ ಅವನಿಗೆ ಬಿಡುಗಡೆಯೇ ಇಲ್ಲವೇನೋ ಎಂಬಂತಾಗಿತ್ತು. ಈ ಅವಧಿಯಲ್ಲೇ ಅವನ ಪ್ರಧಾನ ಪೋಷಕನಾಗಿದ್ದ ನವಾಬ್ ಯೂಸುಫ್ ಅಲಿ ಖಾನ್‌ನೂ 1865 ರ ಎಪ್ರಿಲ್‌ನಲ್ಲಿ ತೀರಿಕೊಂಡಿದ್ದ.

## ಕಲ್ಬ್ ಅಲಿ ಖಾನ್

ನವಾಬ್ ಯೂಸುಫ್ ಅಲಿ ಖಾನ್‌ನ ತರುವಾಯ ಅವನ ಹಿರಿಯ ಮಗ ನವಾಬ್ ಕಲ್ಬ್ ಅಲಿ ಖಾನ್ ಅಧಿಕಾರ ವಹಿಸಿಕೊಂಡ. ಹೊಸ ನವಾಬನಿಗೂ ಅವನ ಪರಿವಾರಕ್ಕೂ ನವಾಬ್ ಯೂಸುಫ್ ಅಲಿ ಖಾನ್‌ನ ನಿಧನದ ಬಗ್ಗೆ ಸಂತಾಪ ವ್ಯಕ್ತ ಪಡಿಸಲು ಹೋಗಬೇಕಾದುದು ತನ್ನ ಕರ್ತವ್ಯವೆಂದು ಗಾಲಿಬ್ ಭಾವಿಸಿದ. ರಾಮಪುರಕ್ಕೆ ಹೀಗೆ ಎರಡನೆಯ ಬಾರಿ ಹೋಗುವುದಕ್ಕೆ ಮತ್ತೊಂದು ಮಹತ್ವದ ಕಾರಣವೂ ಇತ್ತು. ಅದೆಂದರೆ 1859 ರಿಂದಲೂ ಮೊದಲಿನ ನವಾಬ್ ತನಗೆ ನಿಯಮಿತವಾಗಿ ಕೊಡುತ್ತ ಬಂದಿದ್ದ ನೂರು ರೂಗಳ ಮಾಸಾಶನ ಮುಂದುವರಿದೀತೋ ಇಲ್ಲವೋ ಎಂಬ ಚಿಂತೆ. ನವಾಬ್ ಯೂಸುಫ್ ಅಲಿ ಖಾನ್ ಗಾಲಿಬನ ಶಿಷ್ಯನಾಗಿದ್ದು, ತನ್ನ ಉರ್ದು ಕಾವ್ಯದ ಬಗ್ಗೆ ಆಗಾಗ ಸಲಹೆ-ಸೂಚನೆಗಳನ್ನು ಪಡೆಯುತ್ತಲಿದ್ದ. ಒಂದು ದೃಷ್ಟಿಯಿಂದ ಈ ಸೇವೆಯ ಪ್ರತಿಫಲದ ರೂಪದಲ್ಲೇ ಆ ಮಾಸಾಶನ ದೊರೆಯುತ್ತಿತ್ತೆಂದು ಭಾವಿಸಬಹುದಾಗಿದೆ. ಆದರೆ ಗಾಲಿಬ್ ಮತ್ತು ಹೊಸ ನವಾಬನ ನಡುವೆ ಅಂಥ

ಸಂಬಂಧವೇನೂ ಇರಲಿಲ್ಲ. ಹೊಸ ನವಾಬ್ ಗಾಲಿಬನ ಶಿಷ್ಯನೂ ಆಗಿರಲಿಲ್ಲ; ಗಾಲಿಬನ ಮಾಸಾಶನವನ್ನು ಮುಂದುವರಿಸಬೇಕೆಂಬ ಬಂಧನವೂ ಅವನಿಗಿರಲಿಲ್ಲ. ಹಾಗಾಗಿದ್ದರೆ, ಈ ಕವಿಯ ಕಷ್ಟಪರಂಪರೆ ಮಾತ್ರ ಬೆಳೆಯಬಹುದಿತ್ತು. ಆದ್ದರಿಂದ ಈ ಪರಿಸ್ಥಿತಿ ಬಾರದಂತೆ ನೋಡಿಕೊಳ್ಳುವುದಕ್ಕೂ ಹೊಸ ನವಾಬನ ಭೆಟ್ಟಿಗೆ ಹೋಗುವುದು ಗಾಲಿಬನಿಗೆ ಅನಿವಾರ್ಯವಾಗಿತ್ತು. ಹೊಸ ನವಾಬನ ಅಧಿಕಾರಗ್ರಹಣ ಸಮಾರಂಭದ ದಿನವೇ ಗಾಲಿಬ್ ರಾಮಪುರಕ್ಕೆ ಹೋದ. ಅವನ ಮಾಸಾಶನ ನಿರಾತಂಕವಾಗಿ ಮುಂದುವರಿಯುವುದೆಂಬ ಆಶ್ವಾಸನೆ ಹೊಸ ನವಾಬನಿಂದ ದೊರೆಯಿತು. ಗಾಲಿಬ್ ನೆಮ್ಮದಿಯ ನಿಟ್ಟುಸಿರು ಬಿಟ್ಟ.

ಗಾಲಿಬ್ ಇನ್ನೂ ರಾಮಪುರದಲ್ಲಿರುವಾಗಲೇ ಪಂಜಾಬ್ ಸರಕಾರದಿಂದೊಂದು ಪತ್ರ ಬಂತು. ತನ್ನ 'ದಸ್ತಂಬೂ' ಗ್ರಂಥದ ಒಂದು ಪ್ರತಿಯನ್ನು ಮುಖ್ಯ ಕಾರ್ಯದರ್ಶಿಗೆ ಕಳಿಸಬೇಕೆಂದು ಅದರಲ್ಲಿ ಕೇಳಲಾಗಿತ್ತು. ಸಿಪಾಯರ ದಂಗೆಯ ಕುರಿತು ತಾನು ಬರೆದ ಗ್ರಂಥವನ್ನು ಭಾರತ ಸರಕಾರದ ಪರವಾಗಿ ಪ್ರಕಟಿಸಬೇಕೆಂದು ಮಾಡಿಕೊಂಡ ನಿವೇದನೆಯ ಫಲಸ್ವರೂಪವಾಗಿ ಈ ಪತ್ರ ಬಂದದ್ದು ಸ್ಪಷ್ಟವೇ ಇತ್ತು. ಆದರೆ ರಾಮಪುರದಲ್ಲಿ ಅವನ ಕೈಗೆ ದೊರೆತ ಪ್ರತಿ ಸರಕಾರಕ್ಕೆ ಕಳಿಸುವಂತಹದಾಗಿರಲಿಲ್ಲ. ಈ ಗ್ರಂಥದ ಪ್ರಕಟಣೆಯಿಂದ ತನಗೆ ಭೌತಿಕವಾಗಿಯೂ ಸಾಮಾಜಿಕವಾಗಿಯೂ ಸಾಕಷ್ಟು ಪ್ರಯೋಜನಗಳುಂಟೆಂಬ ನಿರೀಕ್ಷೆಯಿದ್ದುದರಿಂದ, ತಕ್ಷಣವೇ ಅದರ ಹೊಸ ಆವೃತ್ತಿಯ ವ್ಯವಸ್ಥೆ ಮಾಡಿ, ಅದರದೊಂದು ತಿದ್ದಿದ ಪ್ರತಿಯನ್ನು ಮುದ್ರಣಕ್ಕಾಗಿ ಬರೇಲಿಯಲ್ಲಿದ್ದ ತನ್ನ ಮಿತ್ರರಿಗೆ ಕಳಿಸಿದ. ಈ ದ್ವಿತೀಯ ಆವೃತ್ತಿಯ ಒಂದು ಪ್ರತಿಯನ್ನು ಪಂಜಾಬ್ ಸರಕಾರಕ್ಕೆ ರವಾನಿಸಿದ. ಸರಕಾರ ಅದರ ಬಗ್ಗೆ ತಜ್ಞರ ಅಭಿಪ್ರಾಯ ಕೇಳಿತು. ಅದನ್ನೋದಿದ ತಜ್ಞಮಹಾಶಯ ಗಾಲಿಬನ ಶೈಲಿಯನ್ನೇ ಗ್ರಹಿಸಲಾಗದೆ, ಈ ಗ್ರಂಥದಲ್ಲಿ ಈ ಕಾಲದಲ್ಲಿ ಬಳಕೆಯಲ್ಲಿಲ್ಲದ ಅಪರಿಚಿತ ಶಬ್ದಗಳೇ ತುಂಬಿರುವುದರಿಂದ ಈ ಗ್ರಂಥದ ಅರ್ಥವೇ ಆಗುವುದಿಲ್ಲವೆಂದು ಅಭಿಪ್ರಾಯ ಕೊಟ್ಟು ಬಿಟ್ಟ.

ಗಾಲಿಬನನ್ನು ತನ್ನ ರಾಜಕವಿಯೆಂದು ನಿಯಮಿಸುವುದು ಸಾಧ್ಯವಿಲ್ಲವೆಂದು ಗವ್ಹರ್ನರ್ ಜನರಲ್ ಅಂತಿಮ ಆಜ್ಞೆಕೊಟ್ಟ. ಆದರೂ ಪಂಜಾಬಿನ ಲೆ. ಗವ್ಹರ್ನರ್ ಕವಿಯ ಬಿನ್ನಹವನ್ನು ಸಹಾನುಭೂತಿಪೂರ್ವಕ ಪರಿಶೀಲಿಸಿ ಅವನಿಗೆ ವಿಶೇಷ ಗೌರವದ ಪೋಷಾಕು ನೀಡಬಹುದೆಂದೂ ಅವನು ರಾಜದರಬಾರಗಳಲ್ಲಿ ಭಾಗವಹಿಸಲು ಬಂದಾಗ ಅವನಿಗೆ ಹೆಚ್ಚಿನ ದರ್ಜೆಯ ಆಸನದ ವ್ಯವಸ್ಥೆ ಮಾಡಬಹುದೆಂದೂ ಆದೇಶ ನೀಡಲಾಗಿತ್ತು. ಅವನ *ದಸ್ತಂಬೂ* ಗ್ರಂಥವನ್ನು ಸರಕಾರೀ ವೆಚ್ಚದಿಂದ ಪ್ರಕಟಿಸುವುದೇನು ಪ್ರಯೋಜನಕಾರಿಯಲ್ಲವೆಂದೂ ತೀರ್ಮಾನಿಸಲಾಗಿತ್ತು. ಹೀಗಾಗಿ ಅವನ ಮತ್ತೊಂದು ನಿರೀಕ್ಷೆಯ ಮೇಲೆಯೂ ನೀರು ಬಿತ್ತು.

ಈ ಬಾರಿ ಗಾಲಿಬ್ ರಾಮಪುರದಲ್ಲಿ ಸುಮಾರು ಹತ್ತು ವಾರ ತಂಗಿದ್ದ. 1865ರ ಡಿಸೆಂಬರ್ ಕೊನೆಯಲ್ಲಿ ಆತ ದೆಹಲಿಗೆ ಮರಳಿ ಹೊರಟ. ದಾರಿಯಲ್ಲೊಂದು ಭಯಂಕರ ಅಪಘಾತಕ್ಕೆ ಒಳಗಾದ. ಜೋರಾಗಿ ಮಳೆ ಸುರಿಯಲಿತ್ತು. ಹೊಳೆ-ಹಳ್ಳಗಳು ತುಂಬಿ ತುಂಬಿ ಹರಿಯುತ್ತಿದ್ದವು. ಮೊರಾದಾಬಾದ್ ತಲುಪುವ ಮುನ್ನ ರಾಮಗಂಗಾ

ನದಿಯನ್ನು ಸೇತುವೆಯ ಮೂಲಕ ದಾಟಬೇಕು. ಗಾಲಿಬ್ ಪಾಲಕಿಯಲ್ಲಿದ್ದ. ಅವನ ಸೇವಕರು ಸಾಮಾನುಗಳೊಡನೆ ಎತ್ತಿನ ಬಂಡಿಗಳಲ್ಲಿದ್ದರು. ಅವನಿನ್ನೂ ಸೇತುವೆಯ ಮೇಲಿರುವಾಗಲೇ ದೊಡ್ಡ ಪ್ರವಾಹವೊಂದು ಅಪ್ಪಳಿಸಿ ಸೇತುವೆಯೇ ಕೊಚ್ಚಿ ಹೋಯಿತು. ಗಾಲಿಬನೆಲ್ಲೋ ಅವನ ಸಂಗಡಿಗರೆಲ್ಲೋ ಎನ್ನುವಂತಾಯಿತು. ಅಂತೂ ಇಂತೂ ಆತ ತನ್ನ ಮುಂದಿನ ನಿಲ್ದಾಣವಾದ ಮೊರಾದಾಬಾದ್ ಸೇರಿದ. ಚಳಿಗಾಲದ ರಾತ್ರಿಗಳು ಮೈಕೊರೆಯುವಂತಿದ್ದವು. ಆದರೆ ಗಾಲಿಬನ ಬಳಿಗೆ ಹಾಸಿಗೆಯೂ ಇರಲಿಲ್ಲ; ಬೆಚ್ಚನೆಯ ಬಟ್ಟೆಗಳೂ ಇರಲಿಲ್ಲ. ತತ್ಪರಿಣಾಮವಾಗಿ, ಮೊದಲೇ ನಾಜೂಕಾಗಿದ್ದ ಅವನ ಆರೋಗ್ಯ ಮತಿಷ್ಟು ಹದಗೆಟ್ಟು ಅವನು ಹಾಸಿಗೆಯನ್ನೇ ಹಿಡಿಯುವಂತಾಯಿತು. ಗಾಲಿಬ್ 'ಕ್ಯಾರವಾನ್ ಸರಾಯ್', ನಲ್ಲಿ ತಂಗಿರುವ ವಾರ್ತೆ ಹರಡಿತು. ಅಲ್ಲಿದ್ದ ಅವನ ಪರಿಚಿತ ಉಪನ್ಯಾಯಾಧೀಶನೊಬ್ಬ ಅವನನ್ನು ತನ್ನ ಮನೆಗೆ ಕರೆದೊಯ್ದು. ಅವನಿಗೆ ಅಗತ್ಯವಿದ್ದ ಔಷಧೋಪಚಾರ ಕೊಡಿಸಿ ಐದು ದಿನಗಳವರೆಗೆ ಚೆನ್ನಾಗಿ ನೋಡಿಕೊಂಡ. ಅವನ ಆರೋಗ್ಯ ಕೊಂಚ ಸುಧಾರಿಸಿ, ಪ್ರವಾಸಕ್ಕೆ ಯೋಗ್ಯನೆನಿಸಿದೊಡನೆ ಅವನು ಪ್ರಯಾಣವನ್ನು ಮುಂದುವರಿಸಿ 1866 ರ ಜನವರಿ ಮೊದಲ ವಾರದಲ್ಲಿ ದೆಹಲಿ ಸೇರಿದ.

ಈ ದುರ್ದೈವೀ ಅಪಘಾತದಿಂದಾಗಿ ಅವನ ಆರೋಗ್ಯವೇ ಹಾಳಾದಂತಾಯಿತು. ಅವನ ರಾಮಪುರ ಭೇಟ್ಟಿಯೂ ಆರ್ಥಿಕವಾಗಿ ಅಷ್ಟೇನೂ ಯಶಸ್ವಿಯಾಗಿರಲಿಲ್ಲ. ರಾಮಪುರಕ್ಕೆ ಹೊರಡುವ ಮೊದಲೇ ಅವನ ಆರೋಗ್ಯದ ಕಿರುಕಳವಿದ್ದೇ ಇತ್ತು. ಹಾಗೆ ನೋಡಿದರೆ ಆತ ದೆಹಲಿ ಬಿಟ್ಟು ಹೊರಡುವ ಸ್ಥಿತಿಯಲ್ಲಿರಲೇ ಇಲ್ಲ. ಆದರೆ ಪರಿಸ್ಥಿತಿಯ ಒತ್ತಡದ ಕಾರಣ ಆತ ಈ ಪ್ರಯಾಸಕಾರೀ ಪ್ರಯಾಣ ಕೈಕೊಳ್ಳಲೇಬೇಕಾಗಿ ಬಂತು. ಆಗ ಅವನ ಮೇಲೆ ಬಹಳಷ್ಟು ಸಾಲದ ಭಾರವಿತ್ತು. ಈ ಭಾರವಿಳಿಸಲು ರಾಮಪುರವೊಂದೇ ತನಗೆ ನೆರವಾಗುವ ಸ್ಥಳವೆಂಬ ನಿರೀಕ್ಷೆಯಿತ್ತು. ನವಾಬ್ ಕಲ್ಬ ಅಲಿ ಖಾನ್ ಸ್ವತಃ ಸುಶಿಕ್ಷಿತನಾಗಿದ್ದು ವಿದ್ವಾಂಸರ ಹಾಗು ಕವಿಗಳ ಮಹಾಪೋಷಕನೆನಿಸಿದ್ದ. ಗಾಲಿಬ್ ಈವರೆಗೆ ರಾಮಪುರದ ರಾಜಕವಿಯಾಗಿದ್ದು, ಕಲ್ಬ ಅಲಿ ಖಾನ್‌ನ ತಂದೆಯಾದ ಮೊದಲಿನ ನವಾಬನೊಡನೆ ಬಲು ಆತ್ಮೀಯತೆಯಿಂದಿದ್ದ. ಅಷ್ಟಲ್ಲದೆ, ಹೊಸ ಅಧಿಕಾರಗ್ರಹಣದ ಸಂದರ್ಭದಲ್ಲಿ ದರಬಾರ್‌ನೊಡನೆ ಸಂಬಂಧವಿದ್ದ ವ್ಯಕ್ತಿಗಳಿಗೂ ರಾಜಪರಿವಾರದ ಸದಸ್ಯರಿಗೂ ಹಣದ ರೂಪದಲ್ಲಿ ಧಾರಾಳವಾದ ಕಾಣಿಕೆಗಳನ್ನು ಕೊಡುವ ಪೂರ್ವಪರಂಪರೆಯೂ ಇತ್ತು. ಈ ಹಿನ್ನೆಲೆಯಲ್ಲಿ ಕಲ್ಬ ಅಲಿ ಖಾನ್‌ನಿಂದ ತನಗೂ ಬಲು ದೊಡ್ಡ ರಕಮು ದೊರೆಯಬಹುದೆಂದೂ ಅದರಿಂದಾಗಿ ಸಂಪೂರ್ಣವಲ್ಲದಿದ್ದರೂ ಅವನ ಆರ್ಥಿಕ ಅಡಚಣೆಯ ಬಹು ಭಾಗ ಕಡಿಮೆಯಾಗಬಹುದೆಂದೂ ಆತ ಯೋಚಿಸಿರಬೇಕು. ಆತ್ತ ನವಾಬನು ಉದಾರನಾಗಿದ್ದು, ಕಾವ್ಯ ಕಲೆಗಳ ಪೋಷಕನಾಗಿದ್ದರೂ ಆರ್ಥಿಕ ವಿಷಯದಲ್ಲಿ ಬಲು ಕಟ್ಟು-ನಿಟ್ಟಿನವನಾಗಿದ್ದ. ನವಾಬನ ಸುತ್ತಲೂ ಅನೇಕ ಲೇಖಕರೂ ಕವಿಗಳೂ ಸುಳಿದಾಡುತ್ತಲೇ ಇದ್ದರು. ಆದರೆ ಅವರಿಗೆ ಆರ್ಥಿಕ ನೆರವು ಬೇಕಿದ್ದರೆ ಅವರು ನವಾಬನ ಆಡಳಿತ ವಿಭಾಗದಲ್ಲಿ ಒಂದಿಲ್ಲೊಂದು ಕೆಲಸ ಮಾಡಲೇ ಬೇಕಾಗುತ್ತಿತ್ತು. ಯಾರೊಬ್ಬ ಕವಿಯೋ

ಲೇಖಕನೋ ಆಗಿದ್ದ ಮಾತ್ರಕ್ಕೆ ಅವನಿಗೆ ಅನಾಯಾಸ ಆರ್ಥಿಕ ಸಹಾಯ ಸಿಕ್ಕೀತೆನ್ನುವ ಹಾಗಿರಲಿಲ್ಲ. ಅಂತೆಯೇ ಗಾಲಿಬನಿಗೆ ನಿರಾಸೆಯುಂಟಾದದ್ದು ಸಹಜವೇ ಆಗಿತ್ತು. ಅವನಿಗೆ ಯಾವ ದೊಡ್ಡ ದೇಣಿಗೆಯೂ ದೊರೆಯಲಿಲ್ಲ; ವಿಶೇಷ ಸ್ವರೂಪದ ಸನ್ಮಾನವೂ ಪ್ರಾಪ್ತವಾಗಲಿಲ್ಲ. ಮುಕುಟಧಾರಣ ಸಮಾರಂಭದ ಸಂದರ್ಭದಲ್ಲಿ ಅವನಿಗೆ ಕೇವಲ ಸಾವಿರ ರೂಗಳ ಕಾಣಿಕೆ ಹಾಗು ಆತ ಹೊರಡುವ ಮುನ್ನ ಇನ್ನೂರು ರೂ.ಗಳ ಪ್ರಯಾಣವೆಚ್ಚ ಕೊಡಲಾಯಿತು.

ಉರಿಯುವ ಬೆಂಕಿಗೆ ಮತ್ತಿಷ್ಟು ಎಣ್ಣೆ ಸುರಿದಂತೆ ಆತ ದೆಹಲಿ ತಲುಪಿದ ನಂತರ ಆತನಿಗೂ ನವಾಬನಿಗೂ ಒಂದು ಘರ್ಷಣೆ ಶುರುವಾಯಿತು. ನವಾಬ್ ಸಣ್ಣದೊಂದು ಪರ್ಶಿಯನ್ ಗದ್ಯಲೇಖನವನ್ನು ಗಾಲಿಬ್‌ನಿಗೆ ಕಳಿಸಿ, ಅದೊಂದು ಪುಸ್ತಕದ ಪ್ರಸ್ತಾವನೆಯಾಗಲು ಯೋಗ್ಯವೇ ಹೇಗೆಂದು ತಿಳಿಸಲು ಕೇಳಿಕೊಂಡ. ಆ ಲೇಖನದಲ್ಲಿ, ಭಾರತದಲ್ಲಿ ಆಗ ಬಳಕೆಯಲ್ಲಿದ್ದರೂ ಹಳೆಯ ಪ್ರಸಿದ್ಧ ಪರ್ಶಿಯನ್ ಲೇಖಕರು ಬಳಸಿದ ರೀತಿಗೆ ವ್ಯತಿರಿಕ್ತವಾದ ಹಲವೊಂದು ಪದಪುಂಜಗಳನ್ನು ಬಳಸಲಾಗಿತ್ತು. ಗಾಲಿಬ್ ಅವುಗಳನ್ನು ಸೂಕ್ತವಾಗಿ ಬದಲಾಯಿಸಿದ. ಆ ತಿದ್ದಿದ ಲೇಖನ ನವಾಬನ ಕೈಸೇರಿ ಗಾಲಿಬ್ ಮಾಡಿದ ಬದಲಾವಣೆಗಳನ್ನು ಗಮನಿಸಿ ಆತ ಗಾಲಿಬನಿಂದ ವಿವರಣೆ ಬಯಸಿ, ಕೆಲವು ಪ್ರಶ್ನೆಗಳನ್ನು ಬರೆದು ಕಳಿಸಿದ್ದಲ್ಲದೆ, ತನ್ನ ಬರವಣಿಗೆಯ ಧೋರಣೆಯನ್ನು ಸಮರ್ಥಿಸಿಕೊಳ್ಳುವ ಕೆಲವು ಭಾರತೀಯ ಪರ್ಶಿಯನ್ ವಿದ್ವಾಂಸರ ಹೆಸರುಗಳನ್ನು ಎತ್ತಿ ತೋರಿಸಿದ್ದ. ಗಾಲಿಬನಿಗೆ ಮೊದಲಿನಿಂದಲೂ ಭಾರತೀಯ ಪರ್ಶಿಯನ್ ವಿದ್ವಾಂಸರ ಬಗ್ಗೆ ತಾತ್ಸಾರ. ಅಂತೆಯೇ ಅವನು ನವಾಬನ ಧೋರಣೆಯ ಬಗ್ಗೆ ಬಲು ಖಾರವಾದ ಉತ್ತರ ಬರೆದು ಹಾಕಿದ. ನವಾಬ್ ಮೂಲತಃ ಸಂಪ್ರದಾಯವಾದಿ. ಗಾಲಿಬನ ಉತ್ತರದಲ್ಲಿದ್ದ ಆಶಯ ಹಾಗು ಅಭಿವ್ಯಕ್ತಿಗಳೆರಡೂ ಅವನಿಗೆ ಸರಿಬೀಳಲಿಲ್ಲ. ಹೀಗೆ ಶುರುವಾಯಿತು. ಅಪ್ರಿಯವಾದ ಘರ್ಷಣೆ ಗಾಲಿಬನಿಗೆ ಗಾಬರಿಯೇ ಆಯಿತು. ಇದರಿಂದ ತನ್ನ ಮಾಸಾಶನ ನಿಂತು ಹೋಗುವುದೇನೋ ಎಂಬ ಅಳುಕು ಆತನದು. ಕೊನೆಗೆ ಗಾಲಿಬ್ ನವಾಬನಿಗೇ ಸೈ ಎಂದು ಶರಣಾದ. ಕಲ್ಬ್ ಅಲಿ ಖಾನನೂ ಈ ತಿಕ್ಕಾಟವನ್ನು ದೀರ್ಘಕ್ಕೆಳೆಯದೆ ತಕ್ಷಣ ಮುಕ್ತಾಯಗೊಳಿಸಿದ. ಆದರೆ ಅವರಿಬ್ಬರ ನಡುವೆ ನಡೆಯುತ್ತಿದ್ದ ಸಾಹಿತ್ಯಿಕ ಸಮಾಲೋಚನೆಯ ಆಸೆ ಕಮರಿ ಹೋಯಿತು. ಇನ್ನಿತರ ಕೆಲವು ಕಾರಣಗಳಿಂದಾಗಿ ಅವರಿಬ್ಬರಲ್ಲಿ ತಪ್ಪು ತಿಳುವಳಿಕೆ ಹೆಚ್ಚುತ್ತಲೇ ಹೋಯಿತು. ತತ್‌ಪರಿಣಾಮವಾಗಿ, ಗಾಲಿಬನಿಗೆ ದೊರೆಯಬಹುದಾದ ವಿಶೇಷ ಗೌರವಧನ ನಿಂತು ಹೋಯಿತು. ಮುಂದೆ ಅವರಿಬ್ಬರ ನಡುವಿನ ಸಂಬಂಧ ಕೇವಲ ಔಪಚಾರಿಕವಾಗಿ ಉಳಿಯಿತು.

## ಕೊನೆಯುಸಿರು

ಕವಿಯ ಬದುಕಿನ ಕೊನೆ ತೀರ ಹತ್ತಿರವಾಗುತ್ತ ನಡೆದಿತ್ತು. ಬಹುಕಾಲದಿಂದ

ಅವನ ಆರೋಗ್ಯ ಕೆಡುತ್ತಲೇ ಇತ್ತು. ರಾಮಪುರದಿಂದ ಮರಳಿ ಬರುವಾಗ ಆತನೆದುರಿಸಬೇಕಾಗಿ ಬಂದ ಅಪಘಾತ ಅವನನ್ನಿನ್ನೂ ಘಾಸಿಗೊಳಿಸಿತ್ತು. ಅದಲ್ಲದೆ, ಆರ್ಥಿಕ ಅಭಾವಸ್ಥಿತಿಯಿಂದಾಗಿ ಅವನು ಮೊದಲಿನ ಮಟ್ಟದ ಬದುಕು ಸಾಗುವುದು ದುಸ್ಸಾಧ್ಯವಾಗಿತ್ತು. ತನ್ನ ಆರಂಭಿಕ ದಿನಗಳಲ್ಲಿ ಹಾಗು ಪ್ರಾಯದ ಕಾಲದಲ್ಲಿ ಆತ ಬಲು ಸುಖವಾಸಿಯಾಗಿದ್ದ. ವರ್ಷಗಳುರುಳಿದಂತೆ, ಬ್ರಿಟಿಷ್ ಬೊಕ್ಕಸದಿಂದ ಹಾಗು ರಾಮಪುರದ ನವಾಬನಿಂದ ದೊರೆತ ಧನ ಸಹಾಯದ ಮೇಲಷ್ಟೇ ಅವಲಂಬಿಸಿರುವ ಬದುಕು ಅವನದಾಯಿತು. ಈ ಮಧ್ಯೆ ಅವನ ಹೊಣೆಗಾರಿಕೆ, ಮುಖ್ಯವಾಗಿ ಜೈನುಲ್ ಅಬಿದೀನ್ ಖಾನ್‌ನ ಎರಡೂ ಮಕ್ಕಳು ಇವನೊಡನೆಯೇ ಇರಲು ಬಂದಾಗಿನಿಂದ, ಹೆಚ್ಚುತ್ತಲೇ ಹೊರಟಿತು. ಹಲವು ಬಗೆಯ ಕಾಹಿಲೆ-ಕಸಾರಿಕೆಗಳೂ ಅವನ ಜೀವ ಹಿಂಡತೊಡಗಿದವು. ಅವನ ಮಲಬದ್ಧತೆಯಿಂದಾಗಿ ಇನ್ನಿತರ ಶಾರೀರಿಕ ತೊಂದರೆಗಳು ಪೀಡಿಸಲಾರಂಭಿಸಿದವು. 1862 ಮತ್ತು 1863 ರಲ್ಲಿ ಮೈ ಮೇಲೆಲ್ಲ ಬೊಕ್ಕೆಗಳು ಗಾಯಗಳು ಉಂಟಾಗಿ ಅವನನ್ನು ತುಂಬಾ ಬಲಹೀನಗೊಳಿಸಿದವು. ಇವುಗಳಿಂದ ಕೊಂಚ ಗುಣಮುಖನಾದನೆನ್ನುವ ಹೊತ್ತಿಗೆಂದರೆ ಅವನಿಗೆ 'ಹರ್ನಿಯಾ' ಬಾಧೆ ಆರಂಭವಾಯಿತು. ಜೊತೆಗೆ ಮಧುಮೇಹದ ಲಕ್ಷಣಗಳು ಇದ್ದವು. ಕ್ರಮೇಣ ಅವನ ಊಟದ ಪ್ರಮಾಣ ಕಡಿಮೆಯಾಯಿತು. ಅವನು ತನ್ನ ಹೆಚ್ಚಿನ ವೇಳೆಯನ್ನೆಲ್ಲ ಮನೆಯ ಒಳಗಡೆಯೇ ಕಳೆಯುತ್ತಿದ್ದ. ಇಂಥ ಸಂದರ್ಭದಲ್ಲಿ ತನ್ನ ಬದುಕಿನುದ್ದಕ್ಕೂ ನಡೆಸುತ್ತಾ ಬಂದ ಸಾಹಿತ್ಯಿಕ ಚಟುವಟಿಕೆಗಳ ಮಾತು ಹಾಗಿರಲಿ, ನಿತ್ಯದ ಪತ್ರ-ವ್ಯವಹಾರ ನೋಡಿಕೊಳ್ಳುವುದೂ ಕಷ್ಟಸಾಧ್ಯವಾಯಿತು. ಅಂತೆಯೇ ಎರಡು ಸ್ಥಾನಿಕ ವಾರಪತ್ರಿಕೆಗಳಲ್ಲಿ ಪ್ರಕಟಣೆ ಕೊಟ್ಟು ಇನ್ನು ಮುಂದೆ ತನ್ನಿಂದಾವ ಸಾಹಿತ್ಯಿಕ ಸಾಧನೆ ಸಾಧ್ಯವಿಲ್ಲವೆಂದೂ, ತನ್ನ ಮಿತ್ರರಾಗಲೀ ಶಿಷ್ಯರಾಗಲೀ ತಿದ್ದುಪಡಿಗಾಗಿ ತಮ್ಮ ಹೊಸ ಕಾವ್ಯಗಳನ್ನು ತನಗೆ ಕಳಿಸಬಾರದೆಂದೂ ನಿವೇದನೆ ಮಾಡಿಕೊಂಡ. ಆದರೆ ಈ ಬಿನ್ನಹಕ್ಕೆ ಯಾರೂ ಅಷ್ಟು ಮಹತ್ವ ಕೊಡಲಿಲ್ಲ. ಅವನ ಮಿತ್ರರು ಅವನಿಗೆ ಪತ್ರಗಳನ್ನು ಬರೆಯುತ್ತಲೇ ಇದ್ದರು; ಅವನು ಅವುಗಳಿಗೆ ಉತ್ತರ ಬರೆಯಲೇ ಬೇಕಾಗುತ್ತಿತ್ತು.

ಕೊನೆಯ ಗಳಿಗೆ ಹತ್ತಿರಗೊಳ್ಳುತಲಿತ್ತು. ಅವನ ಅಶಕ್ತತೆ ಸಾಕಷ್ಟು ಬೆಳೆದಿತ್ತು. ಒಮ್ಮೊಮ್ಮೆ ಕಣ್ಣಿಗೆ ಕತ್ತಲೆ ಕವಿದಂತಾಗಿ ಮೂರ್ಛೆ ಹೋಗುವುದು ನಡೆದಿತ್ತು. ಗಟ್ಟಿ ಆಹಾರವಂತೂ ಹೋಗುತ್ತಲೇ ಇರಲಿಲ್ಲ. ಹೀಗಿರುವಾಗಲೇ 1869 ರ ಫೆಬ್ರವರಿ 14 ರಂದು ಮೆದುಳಿನ ರಕ್ತ ಒತ್ತಡದಿಂದ ಆತ ಮೂರ್ಛೆ ಹೋದ. ಎಂಥ ಅತ್ಯುತ್ತಮ ಔಷಧೋಪಚಾರ ನಡೆಸಿದರೂ ಪ್ರಯೋಜನವಾಗಲಿಲ್ಲ. ಮರುದಿನ ಅಂದರೆ 1869 ರ ಫೆಬ್ರವರಿ 15 ರಂದು ಮಧ್ಯಾಹ್ನದ ನಂತರ ಆತ ಕೊನೆಯುಸಿರೆಳೆದ. ಅದೇ ದಿನ ಸಾಯಂಕಾಲ ಮೃತ ಶರೀರವನ್ನು ನಿಜಾಮುದ್ದೀನ್ ಗ್ರಾಮಕ್ಕೊಯ್ದು ಲೋಹಾರು ಮನೆತನದ ಸ್ಮಶಾನ ಭೂಮಿಯಲ್ಲಿ ಅಂತ್ಯಕ್ರಿಯೆ ಮಾಡಲಾಯಿತು. ಅವನೊಂದಿಗೆ ಭಾರತದ ಶ್ರೇಷ್ಠ ಪರ್ಶಿಯನ್ ಕವಿಗಳಲ್ಲಿ ಕೊನೆಯ ಕವಿಯೇ ಹೊರಟು ಹೋದಂತಾಯಿತಲ್ಲದೆ ಉರ್ದು ಕಾವ್ಯದ ಮುಂದಿನ ಉನ್ನತ ಸಾಧನೆಗೆ ಹೊಸ ದಾರಿ ತೆರೆದು ತೋರಿಸಿದ ಬೆಳಕೇ ಕಣ್ಮರೆಯಾದಂತಾಯಿತು.

# ಗಾಲಿಬನ ಕಲೆ

ಗಾಲಿಬ್ 11 ಅಥವಾ 12 ರ ಎಳೆವರೆಯದಲ್ಲಿಯೇ ತನ್ನ ಬರವಣಿಗೆ ಆರಂಭಿಸಿದ. ಆರಂಭದಲ್ಲಿ 'ಅಸದ್' ಎಂಬ ಕಾವ್ಯನಾಮ ಇಟ್ಟುಕೊಂಡಿದ್ದ. ಅಸದುಲ್ಲಾ ಖಾನ್ ಎಂಬ ಹೆಸರುಳ್ಳವನಿಗೆ ಈ ಕಾವ್ಯನಾಮವು ಉಚಿತವೇ ಆಗಿತ್ತು. ಆದರೆ ಅದೇ ಕಾವ್ಯನಾಮದಿಂದ ಮತ್ತೊಬ್ಬ ಕವಿಯು ಬರೆಯುತ್ತಿದ್ದ ಸಂಗತಿ ಆಮೇಲೆ ಅವನ ಗಮನಕ್ಕೆ ಬಂತು. ಈ ಹೆಸರಿನ ಗೊಂದಲವಾಗದಿರಲೆಂದು ತಾನು 'ಗಾಲಿಬ್' ಎಂಬ ಕಾವ್ಯನಾಮವಿರಿಸಿಕೊಂಡ. ಇಸ್ಲಾಂ ಧರ್ಮದ ಪ್ರವಾದಿ ಮೊಹಮ್ಮದ್ ಪೈಗಂಬರರ ಅಳಿಯ ಅಲಿಗೆ 'ಅಲ್ಲಾಹ್-ಅಲ್-ಗಾಲಿಬ್' ಎಂಬ ಗೌರವ ಪದವಿಯಿದ್ದಿತಾದ್ದರಿಂದ 'ಗಾಲಿಬ್' ಎಂಬ ಕಾವ್ಯನಾಮವಿರಿಸಿಕೊಂಡ. ಈ ಕಾವ್ಯನಾಮದ ಆಯ್ಕೆಯೂ ಅವನ ಪಾಲಿಗೆ ಅಭಿಮಾನಾಸ್ಪದವೇ ಆಗಿತ್ತು. ಅವನು ಆರಂಭದ ಹಂತದಲ್ಲಿ ಪರ್ಶಿಯನ್ ಭಾಷೆಯಲ್ಲಿ ಬರೆಯುತ್ತಿದ್ದನೆಂಬುದಕ್ಕೆ ಆಧಾರವಿದ್ದರೂ ಆತ ಉರ್ದುಕಾವ್ಯಕ್ಕೆ ಹೆಚ್ಚು ಗಮನ ಹರಿಸಿದ್ದೇನು ಸುಳ್ಳಲ್ಲ.

1816 ರ ಹೊತ್ತಿಗೆಂದರೆ ಅವನು ಸಾಕಷ್ಟು ಬರೆದಿದ್ದ. ಅಂತೆಯೇ, ಅವನ ಉರ್ದು ದೀವಾನ್ ಬೆಳಕಿಗೆ ಬರಲು ಅನುಕೂಲವಾಯಿತು. ಮೊದಮೊದಲು, ಅವನ ಮೇಲೆ ಅವಾಸ್ತವ ವಿಷಯಗಳ ಕುರಿತು ಕೃತಕ ಶೈಲಿಯಲ್ಲಿ ಬರೆದು ಹೆಸರಾಗಿದ್ದ ಕೆಲವು ಪರ್ಶಿಯನ್ ಕವಿಗಳ ಪ್ರಭಾವವೇ ಬಹಳಷ್ಟಾಗಿತ್ತು. ಆ ಹಂತದಲ್ಲಿಯ ಗಾಲಿಬನ ರಚನೆಗಳಲ್ಲೂ ಆ ದೋಷಗಳು ಕಂಡು ಬರುತ್ತವೆ. ಅವನನ್ನು ಈ ನಿರರ್ಥಕ ಮಾರ್ಗದಿಂದ ದೂರ ಸರಿಸಲು ಯಾರೂ ಪ್ರಯತ್ನಿಸಲಿಲ್ಲವೆಂದಲ್ಲ. ಆದರೆ ಮೊದಲೇ ಅವನು ನಿಷ್ಠುರ ಹಾಗು ಸ್ವಾಭಿಮಾನಿ ಸ್ವಭಾವದವನಾಗಿದ್ದ ಕಾರಣ, ಅವನು ಇನ್ನಿತರರ ಟೀಕೆ-ಟಿಪ್ಪಣಿಗಳಿಗೆ ಗಮನವನ್ನೇ ಕೊಡುತ್ತಿರಲಿಲ್ಲ. ಕೆಲ ಕಾಲದ ನಂತರ, ಆತ ದೆಹಲಿಗೆ ಬಂದು ನೆಲಸಿದ ಮೇಲೆ, ಅವನ ಕೆಲವು ಆತ್ಮೀಯ ಮಿತ್ರರು ಅವನು ಈ ಶೈಲಿಯನ್ನು ಬಿಡುವುದೊಳತೆಂದೂ, ಸಾಮಾನ್ಯ ವಾಚಕನಿಗೂ ರುಚಿಸುವ ರೀತಿಯಲ್ಲಿ ಅವನ ಉರ್ದು ದೀವಾನ್ ನಿಂದ ಆಯ್ಕೆ ಮಾಡಿದ ಪದ್ಯಗಳನ್ನು ಪ್ರಕಟಿಸಬೇಕೆಂದೂ ಒತ್ತಾಯ ಮಾಡಿದರು. ಅವನು ಈ ಪ್ರಾಮಾಣಿಕ ಮೈತ್ರಿಯ ಸಲಹೆಯನ್ನು ತಳ್ಳಿ ಹಾಕುವಂತಿರಲಿಲ್ಲ. ಅಂತೆಯೇ ಸಾಮಾನ್ಯ ವಾಚಕವರ್ಗಕ್ಕೆ ತಿಳಿಯುವ ರೀತಿಯಲ್ಲಿ ತನ್ನ ಮೂಲ ದೀವಾನ್ ನಿಂದ ಕೆಲವು ಭಾಗಗಳನ್ನು ತೆಗೆದು ಹಾಕಿದ.

ದೀವಾನ್ ಮೊದಲ ಬಾರಿಗೆ ಪ್ರಕಟವಾದದ್ದು 1841 ರಲ್ಲಿ. ಉರ್ದು ಸಾಹಿತ್ಯ

ಚರಿತ್ರೆಯಲ್ಲಿ ಒಂದು ಹೊಸ ತಿರುವು ತಂದು ಕೊಟ್ಟ ಕೃತಿಯಿದು. 1100 ಕ್ಕಿಂತ ಕಡಿಮೆ ಸಂಖ್ಯೆಯ ಪದ್ಯಗಳುಳ್ಳ ಈ ಪುಟ್ಟ ಕೃತಿ ಉರ್ದು ಭಾಷೆಯ ಮೇಲೆ, ಮುಖ್ಯವಾಗಿ ಉರ್ದು ಕಾವ್ಯದ ಮೇಲೆ ಮಾಡಿದ ದೂರಗಾಮೀ ಪರಿಣಾಮ ಅದ್ಭುತವಾದದ್ದು. ಅದಾದ ನಂತರ ಗಾಲಿಬ್ 28 ವರ್ಷ ಜೀವಿಸಿದ್ದ. ಈ ಸುದೀರ್ಘ ಕಾಲಾವಧಿಯ ಕೊನೆಯಲ್ಲಿ ಕೂಡ ದೀವಾನ್ ದ ದ್ವಿಪದಿಗಳ ಸಂಖ್ಯೆ 1800 ಕ್ಕಿಂತ ಹೆಚ್ಚಾಗಲಿಲ್ಲ.

ಉರ್ದು ಭಾಷೆ ಅನೇಕ ಭಾರತೀಯ ಭಾಷೆಗಳ, ಅದರಲ್ಲೂ ಮುಖ್ಯವಾಗಿ ಖಡೀ ಬೋಲಿ ಹಾಗು ಹರಿಯಾಣವಿ ಭಾಷೆಗಳ ಸಂಯೋಗದಿಂದ ಬೆಳೆದು ಬಂದ ಭಾಷೆ. ಅಂತೆಯೇ ಅದರ ಶಬ್ದಸಂಪತ್ತಿಯ ಮೂಲ ಸಾಮಗ್ರಿಯೆಲ್ಲ ಬಂದದ್ದು ಭಾರತೀಯ ಭಾಷೆಗಳಿಂದಲೇ. ಅದರ ಲಿಪಿ ಮಾತ್ರ ಮುಸ್ಲೀಮರ ಆಗಮನದಿಂದ ಈ ದೇಶದಲ್ಲಿ ಬಳಕೆಯಲ್ಲಿ ಬಂದ ಪರ್ಶಿಯನ್ ಲಿಪಿಯನ್ನು ಆಧರಿಸಿದ್ದು. ಆರಂಭ ಕಾಲದಲ್ಲಿ ಉರ್ದು ಭಾಷೆಯಲ್ಲಿ ಬರೆಯಲಾರಂಭಿಸಿದ ಕವಿಗಳೆಲ್ಲ ಪರ್ಶಿಯನ್ ಬಲ್ಲಿದರಾಗಿದ್ದರಲ್ಲದೆ, ಹೆಚ್ಚಾಗಿ ಧಾರ್ಮಿಕ ಮನೋವೃತ್ತಿಯನ್ನೇ ಹೊಂದಿದವರಾಗಿದ್ದರು. ಅವರು ಉರ್ದುವಿನಲ್ಲಿ ಬರೆಯಲಾರಂಭಿಸಿದಾಗ, ಸ್ವಾಭಾವಿಕವಾಗಿಯೇ, ಶ್ರೇಷ್ಠ ಪರ್ಶಿಯನ್ ಕವಿಗಳು ಹಾಕಿ ಕೊಟ್ಟ ದಾರಿಯನ್ನೇ ತುಳಿದರು. ಪರ್ಶಿಯನ್ ಕಾವ್ಯದಲ್ಲಿಯ ಅತ್ಯಂತ ಮಹತ್ವದ ಪ್ರಕಾರಗಳೆಂದರೆ - ಗಝಲ್, ಕಸೀದಾ ಹಾಗು ಮತ್ನವಿ.

ಇವೆಲ್ಲ ಪ್ರಕಾರಗಳಲ್ಲಿ ವಿಶೇಷವಾಗಿ ಗಝಲ್‌ನಲ್ಲಿ ಪ್ರೇಮ, ಸುರೆ ಹಾಗು ಆಧ್ಯಾತ್ಮ ರಹಸ್ಯಗಳೇ ಪ್ರಧಾನ ವಿಷಯಗಳು. ಹೀಗೆ, ಉರ್ದು ಕಾವ್ಯರಚನೆ ಆರಂಭಗೊಳ್ಳುವ ಪೂರ್ವದಲ್ಲೇ ಕಾವ್ಯದ ಸಿದ್ಧಶೈಲಿಯೊಂದು ಲಭ್ಯವಿತ್ತು. ಈ ಪ್ರಕಾರಗಳ ಅಥವಾ ಅವುಗಳ ವಸ್ತು-ವಿಷಯಗಳಿಂದ ಪ್ರಭಾವಿತರಾಗದೆ ಬರೆಯುವುದು ಉರ್ದು ಕವಿಗಳಿಗೆ ಸಾಧ್ಯವೇ ಇರಲಿಲ್ಲ. ಅಂತೆಯೇ ಆ ಹಂತದ ಕಾವ್ಯ ಹೆಚ್ಚಾಗಿ ಕೃತಕ ಹಾಗು ಕಾಲ್ಪನಿಕವಾಗಿ ಕಾಣಿಸುತ್ತದೆ. ಆಗಿನ ಕವಿಗೆ ಸ್ವಂತ ಅನುಭವದ ಅಭಾವವಿತ್ತು. ಆದರೂ ತನಗೆಲ್ಲ ತಿಳಿದಿದೆಯೆಂಬಂತೆ ಆತ ಬರೆಯುತ್ತಿದ್ದ. ವಿಷಾದದ ಸಂಗತಿಯೆಂದರೆ, ಜೀವನದ ಇತರ ಸಮಸ್ಯೆಗಳತ್ತ ಕವಿಗಳ ಗಮನವೇ ಹರಿಯದಿದ್ದುದು. ಪ್ರೇಮ, ಸುರೆ ಹಾಗು ಆಧ್ಯಾತ್ಮಿಕ ರಹಸ್ಯಗಳು ತಮ್ಮ ಮಟ್ಟಿಗೆ ಮಹತ್ವದ ವಿಷಯಗಳಾಗಿರಬಹುದು. ಆದರೆ ಅವು ಮಾನವನ ಸಮಗ್ರ ಜೀವನವನ್ನೇ ಸಂಕೇತಿಸಲಾರವು. ಅಂತೆಯೇ ಅಂದಿನ ಕವಿಗಳು ದಂತಗೋಪುರದಲ್ಲಿ ಕುಳಿತು ಬರೆದೇ ಬರೆದರೂ ಅವರ ಲೇಖನಿಗೆ ನೆಲದ ಮೇಲಿನ ವಾಸ್ತವದ ಗಾಳಿ ತಟ್ಟಲೇ ಇಲ್ಲ.

ಗಾಲಿಬ್ ಈ ಪರಿಸ್ಥಿತಿಯ ವಿರುದ್ಧ ದನಿಯೆತ್ತಿದ ಮೊದಲ ಬಂಡುಗಾರ. ಮೊದಮೊದಲು ಅವನೂ ತನ್ನ ಪೂರ್ವಿಕರರಂತೆ ಕಲ್ಪನಾಲೋಕದ ವಸ್ತು - ವಿಷಯಗಳನ್ನು ಕುರಿತಾಗಿಯೇ ಬರೆಯುತ್ತಿದ್ದ. ಕೆಲಕಾಲದಲ್ಲೇ ಈ ತರದ ಕಾವ್ಯದ ನಿರರ್ಥಕತೆ ಅವನಿಗೆ ಮನದಟ್ಟಾಗಿ ಕಾವ್ಯ ಹೆಚ್ಚು ಪರಿಣಾಮಕಾರಿ ಎನಿಸುವಂತೆ ಹೊಸ ರೀತಿಯಲ್ಲಿ ಬರೆಯಲಾರಂಭಿಸಿದ. ಬದುಕಿನ ವಿವಿಧ ಸಮಸ್ಯೆಗಳೂ ಅವನ ಕಾವ್ಯದ ಪರಿಧಿಯಲ್ಲಿ ಸೇರಿಕೊಂಡವು. ಮನುಷ್ಯನ ಮತ್ತು ಅವನ ನಂಬಿಕೆ, ಅಂತರಂಗದ

ಆಲೋಚನೆ, ಪ್ರೀತಿ, ಮಾನಸಿಕ ಕ್ರಿಯೆ-ಪ್ರತಿಕ್ರಿಯೆಗಳಲ್ಲದೆ ಮನುಷ್ಯನ ನಿತ್ಯ ಜೀವನದಲ್ಲಿ ಬರುವ ವೈವಿಧ್ಯಪೂರ್ಣ ಅಸಂಭವಗಳೂ ಅವನ ಕಾವ್ಯದ ವಸ್ತುಗಳಾದವು. ಅಂತೆಯೇ ಅವನ ಕೈಯಲ್ಲಿ ಕಾವ್ಯವೆಂದರೆ ನಿತ್ಯದ ಜೀವನಾನುಭವಕ್ಕೆ ಹಿಡಿದ ಕನ್ನಡಿಯೆನಿಸಿತು. ಆದರಿಂದ ವಾಚಕನಿಗೂ ಹೊಸ ರಸಾನುಭವ ದೊರೆತಂತಾಗಿ ಅವನ ಅರ್ಥಗ್ರಹಣದ ವ್ಯಾಪ್ತಿ ಬೆಳೆಯಲು ಅನುಕೂಲವಾಯಿತು. ಕಳೆದ ಇನ್ನೂರು ವರ್ಷಗಳಿಂದಲೂ ಬೆಳೆದು ಬಂದ ಕಾವ್ಯಪರಂಪರೆಯಿಂದ ಸಂಪೂರ್ಣವಾಗಿ ಮುಕ್ತನಾಗಿರುವುದು ಗಾಲಿಬನಿಗೆ ಸಾಧ್ಯವೂ ಇರಲಿಲ್ಲ. ಅವನ ದೀವಾನ್ ನಲ್ಲಿ, ತನ್ನ ಪೂರ್ವಿಕರು ತುಳಿದ ದಾರಿಯನ್ನೇ ಹಿಡಿದ ಬೇಕಾದಷ್ಟು ಉದಾಹರಣೆಗಳು ದೊರೆಯುತ್ತವೆ. ಅವನ ಹಿರಿಮೆ ಗೋಚರಿಸುವುದು ಇಂಥ ಕೃತಕ ಹಾಗು ಕಾಲ್ಪನಿಕ ಕಾವ್ಯದ ನಿರರ್ಥಕತೆಯನ್ನು ಮನಗಂಡು, ಅದನ್ನು ಪ್ರತಿಭಟಿಸಿ, ಹೊಸ ದಾರಿಯೊಂದನ್ನು ತುಳಿಯಲು ಮುಂದಾದ ಎದೆಗಾರಿಕೆಯಲ್ಲಿ. ಕಳೆದ ಶತಮಾನದಲ್ಲಿ ಉರ್ದು ಕಾವ್ಯ ಬಲು ದೊಡ್ಡ ಎತ್ತರಗಳನ್ನು ಸಾಧಿಸಿದೆ; ಪ್ರಶಂಸನೀಯ ಯಶಸ್ಸನ್ನು ಸಂಪಾದಿಸಿದೆ. ಬಾಹ್ಯ ಜಗತ್ತಿನೊಡನೆ ನಾವಿಟ್ಟುಕೊಂಡ ಸಂಪರ್ಕ ಹಾಗು ಪಾಶ್ಚಿಮಾತ್ಯ ಭಾಷೆ ಹಾಗು ಸಾಹಿತ್ಯಗಳ ಅಧ್ಯಯನದಿಂದಾಗಿ ಈ ಪ್ರಗತಿ ಸಾಧ್ಯವಾದದ್ದು ನಿಸ್ಸಂದೇಹ. ಆದರೆ, ಗತಕಾಲದ ಸಂಕೋಲೆಯಿಂದ ಹೊರ ಜರಿದು ಹೊಸ ವಿಚಾರ ಹಾಗು ಜ್ಞಾನಭಂಡಾರದ ಬಾಗಿಲು ತಟ್ಟುವ ಮೊದಲ ಪಾಠ ಕಲಿಸಿ ಕೊಟ್ಟವನೇ ಗಾಲಿಬನೆಂಬ ಸಂಗತಿಯನ್ನು ಮರೆಯುವಂತಿಲ್ಲ.

ಗಾಲಿಬನ ಉರ್ದು ದೀವಾನ್ ದಲ್ಲಿಯ ವಿವಿಧ ವಿಷಯಗಳ ಮೇಲಿನ ಕೆಲವು ಮಾದರಿ ಪದ್ಯಗಳನ್ನಿಲ್ಲಿ ಕೊಡಲಾಗಿದೆ.

## ದೇವರು

ಆ ಮಹಾ ಆಜ್ಞಾತನ ಗೂಢಗಳರಿಯದ ಅಜ್ಞಾನಿಯು ನೀನು
ಆಜ್ಞಾನಿಯಲ್ಲದಿರೆ ಜಗದವಗುಂಠನದಲ್ಲಿ ಅವನ ಧ್ವನಿ ಕೇಳಬಲ್ಲೆ ನೀನು ॥

ಬಣ್ಣನೆಗೆಟುಕದು ಅವನರೆಮುಚ್ಚಿದ ಮುಖದ ದಿವ್ಯ ಚೆಲುವು
ಸುರುಳಿಗೂದಲಿನ ಚೆಲ್ವಿತೆ ಮೀರಿಸಿ ನಿಂದಿದೆ ಸುಂದರ ಮುಖಮಂಡಲವು ॥

ಅನುಪಮನಾತನು ಅದ್ವಿತೀಯನು ಅವನನು ಕಂಡವರಿಹರಾರು?
ದೈವದ ನಸುವೇ ಸುಳಿವಿದ್ದರು ಸಹ ಅಲ್ಲಿಯೊ ಇಲ್ಲಿಯೊ ಕಂಡಾರು! ॥

ಏನೂ ಇಲ್ಲದ ಕಡೆಗವನಿದ್ದ ಏನೂ ಇಲ್ಲದ ಕಡೆಗವನಿರುವನು
ಬದುಕಿನಲ್ಲಿ ನಾನಿಂಗಿ ಹೋದೆನೆನೆ ನಾನೇ ಇರದಿರಲಿನ್ನೇನು! ॥

ಮಂಜಿನ ಮಣಿಗಳ ಸಾವಿನೊಸಗೆಯನು ಹೊತ್ತು ಬರುವ ರವಿಯು
ನನ್ನಸ್ತಿತ್ವವೊ ತಟ್ಟುವ ತನಕ ನಿನ್ನ ಕೃಪೆಯ ಛವಿಯು ॥

ನನ್ನ ದೇವರನು ತಿಳಿವುದು ಆಳಿವುದು ನನ್ನಳವಿಗೆ ಹೊರತು
ಬಲ್ಲಿದರಳವಿಗೆ 'ಕಿಬ್ಲಾ' ಎಂಬುದು ನಿಜ ಕಿಬ್ಲಾ ತಲುಪುವ ಗುರುತು ॥

ಇನ್ನೂ ಮುಗಿಯದೆ ನಡೆದೇ ಇರುವುದು ಅವನ ಅಲಂಕಾರ
ಅವನಾವರಣದಿ ಅವನ ದರ್ಪಣ ಇರುವುದು ನಿರಂತರ ॥

ದೂರದ ದಾರಿಯ ತುಳಿಯುತ ದಣಿದು ನಿಂತರು ಹಲವು ಜನ
ಮಾಡುವುದೇನು ನಿನ್ನನು ಕಾಣಲಿಕಾಗದೆ ಕುದಿವ ಮನ? ॥

ವಿಶ್ವದ ಕಣಕಣದುನ್ಮಾದದ 'ಕುಣಿತಕ್ಕವನದ್ದೇ ಹೊಣೆಯು
ಬುವಿ - ಬಾನಂಗಳ ತುಂಬಿದ ಚೇತನಕಿನ್ನಾವುದು ಎಣೆಯು? ॥

ನಿನ್ನಾಂತರ್ಯದ ಮೂಲದಿಂದಲೇ ಬಿರಿವುದು ದ್ವೈವಿಕತೆ
ಚೈತನ್ಯಕು ಸರಿ ಅಜ್ಞಾನಕು ಸರಿ ಎಲ್ಲಕು ನೀನೇ ಒರತೆ ॥

ಏಕೋ ದೇವನನೇಕ ರೂಪದಾರಾಧನೆಯೊಂದು ಭ್ರಮೆ
ನನ್ನನ್ನು ನಾಸ್ತಿಕನೆನಿಸಿತು ಕಲ್ಪನೆ ಕಟ್ಟಿದ ಪ್ರತಿ ಪ್ರತಿಮೆ ॥

ಸಮಸ್ತ ವಿಶ್ವದ ವಸ್ತುಕೋಟಿಯಲಿ ನೀನಿಲ್ಲದೆ ಇಲ್ಲಾ
ಆದರೂ ಒಂದೂ ವಸ್ತುವು ನಿನಗೆ ಸಮ-ಸಾಟಿಯೆ ಅಲ್ಲಾ! ॥

## ಧರ್ಮ

ಅಶುದ್ಧಿಯಿಲ್ಲದೆ ಅರಿವಿಗೆ ಬಾರದು ಶುದ್ಧಿಯ ಅಸ್ತಿತ್ವ
ಚೈತ್ರದ ಚೆಲುವಿಗೆ ಕನ್ನಡಿ ಹಿಡಿವುದು ಉಪವನದಂತಸ್ಸತ್ವ ॥

ಒಬ್ಬನೆ ದೇವನ ನಂಬಿದವರಿಗೊ ತ್ಯಾಗ-ಸಹನೆಗಳೆ ನಿಜಧರ್ಮ
ನೂರು ನಂಬಿಕೆ ಮಾಯವಾದರೆ ಉಳಿಯುವುದೊಂದೇ ಧರ್ಮದ ಮರ್ಮ ॥

ಮದಿರಾ - ಮಧುಗಳ ಸ್ಪರ್ಶವದೇತಕೊ ಸತ್ಯದ ಆರಾಧನೆಗೆ?
ಯಾರಾದರು ಸರಿ ಎಸೆಯಬಾರದೇ ನಾಕ, ನರಕದೆಡೆಗೆ? ॥

ಜೀವನದುದ್ದಕು ಧ್ಯಾನ - ಮನನದಲಿ ಧನ್ಯನೆನಿಸಬಹುದು
ಮಾನವ ಜನುಮದ ಮಹತಿಯ ಅಂತವನೆಂತು ಮರೆಯಬಹುದು? ॥

ಸುಸ್ಥಿರ ಭಾವದ ಭಕ್ತಿಯೆ ಶ್ರದ್ಧೆಯ ಶುದ್ಧ ಆವಿಷ್ಕಾರ
ಪ್ರತಿಮಾವರಣದಿ ತೀರಿದ ದ್ವಿಜನಿಗೆ 'ಕಾಬಾ' ದಲಿ ಅಂತಿಮ ಸಂಸ್ಕಾರ ॥

ಸತ್ಯ ಧರ್ಮವನು ಹಾಡಿ ಹೊಗಳುವರು ಚಿರಸ್ಥಾಯಿಯೆಂದು
ಮನ್ನಣ ದೊರೆವುದು ದೇವರ ದರ್ಶನಕದುವೆ ಮೂಲವೆಂದು ॥

ಮರಣಾನಂತರ ನಾಕದ ಕಾಣಿಕೆ ಈ ಬದುಕಿನ ಬದಲು
ಅದಕಿಂತಲು ಘನವಲ್ಲವೆ ಸಾಟಿಯಿರದ ಭಕುತಿಯಮಲು ॥

ಬಲ್ಲೆನು ನಾನು ಸ್ವರ್ಗದ ಸವಿಗತೆಯೊಳಗಿನ ಸತ್ಯವನು
ಮಾನವ ಜೀವಕೆ ಮುದ ನೀಡುವುದು ಗಾಲಿಬ್! ಸವಿಜೇನು! ॥

ಕೊಡುವುದಿದ್ದರೆ ದೇವರೆ, ಶಿಕ್ಷೆ ನಾ ಗೈದ ಪಾಪಗಳಿಗೆ,
ಮೆಚ್ಚಿಕೆ ಬೇಡವೆ ಪಾಪವ ಮಾಡದೆ ಪಟ್ಟ ಬವಣೆಗಳಿಗೆ? ॥

ಸೂಕ್ತವೆ ಸಕಲರ ಪಾಲಿಗೆ ದೊರೆವುದು ಒಂದೇ ಉತ್ತರವು?
ಏರುವ ನಡೆಯಿರಿ ಕರೆದಿರೆ ದೈವಿಕ ಪರ್ವತದೆತ್ತರವು॥

ತ್ಯಾಗ - ಸಹನೆಯಲಿ ತೋರಿಕೆಗೆಂತು ಕೊಡುವುದು ಶ್ರೇಯಸ್ಸು?
ಸತ್ಕಾರ್ಯದ ಫಲ ಸವಿಯುವ ಹಂಬಲ ಪೋಷಿಸಿರಲು ಮನಸು ! ॥

## ರಹಸ್ಯವಾದ

ಪ್ರೀತಿ - ಪ್ರಣಯದಲಿ ಚಾಲನೆ ಪಡೆವುದು ದೃಷ್ಟಿಯ ಸೌಕರ್ಯ
ಮಾತಿನಲಿಳಿಸಲು ಕತ್ತಿ ಕಠಾರಿಯ ಉಪಮೆಯು ಅನಿವಾರ್ಯ ॥

ಅಂತೆಯೆ ದೇವರ ಇರುವಿನ ಅರಿವಿನ ಮಾತು ನಡೆಯುತಿರಲು
ಕಣ್ಣಿಗೆ ಕಟ್ಟಲು ಮದಿರಾ - ಬಟ್ಟಲು ಹೋಲಿಕೆ ನಿಶ್ಚಿತವು ॥

ನೋಡುವ ಕಾರ್ಯ ನೋಡುವ ಜೀವಿ ನೋಡಿಸಿಕೊಂಬಾತ
ಒಂದಾಗಿರಲು, ನನಗೋ ದಿಗಿಲು: ನೋಡುವನಾವಾತ! ॥

ಹಲವು ಹತ್ತು ತರದಾಕೃತಿಯಲ್ಲಿ ಸಾಗರದಸ್ತಿತ್ವ
ಇಲ್ಲವಾದಲ್ಲಿ ಹನಿ, ಹೆದ್ದೊರೆ, ನೊರೆಗಳಿಗೇನು ಮಹತ್ವ? ॥

ಕಂಡುದರರಿವು ಪೂರ್ಣ ರಹಸ್ಯವನರಿಯುವ ರಹದಾರಿ
ಕನಸು ಕಾಣುತಲೆ ಮಲಗಿದಾತನೆ ಕನಸಿನೊಳೆದ್ದ ಪರಿ! ॥

ಕಣ್ಣಿಗೆ ಕಾಣುವ ವಸ್ತುಗಳೆಲ್ಲ ಕಂಡಂತಿರಲಿಕ್ಕಿಲ್ಲ
'ಇದೆ ಇದೆ' ಎಂದೇ ಪದೆ ಪದೆ ನುಡಿದರು ಇದ್ದಂತಿರಲಿಕ್ಕಿಲ್ಲ ॥

ನನ್ನ ದೃಷ್ಟಿಯಲಿ ಜಗವೆಂಬುವುದು ಮಕ್ಕಳ ಚೆಲ್ಲಾಟ
ನನ್ನ ಎದುರಿನಲಿ ಹಗಲೂ ಇರುಳೂ ನಡೆಯುವ ನಗೆಯಾಟ ॥

ಸುಲೇಮಾನ್ ಸಿಂಹಾಸನದಾಟವು ನಡೆವುದು ನನ್ನ ಬಳಿ
ಏಸುವಿನೇನೋ ಚಮತ್ಕಾರಗಳು ಬರಿ ಮಾತಿನದೇ ಶೈಲಿ ॥

ಹೆಸರಿನ ಹೊರತು ವಿಶ್ವದ ಸೃಷ್ಟಿಯೊಳಿರುವುದು ಹೆಚ್ಚೇನು?
ವಸ್ತುವಸ್ತುಗಳ ಅಸ್ತಿತ್ವವು ಬರಿ ಕಲ್ಪನೆಯಲ್ಲದೆ ಮತ್ತೇನು? ॥

ಶ್ರದ್ಧೆ ನನ್ನನ್ನು ಸ್ಥಿರಗೊಳಿಸುವುದು 'ಕಾಫಿರತನ' ವೆತ್ತಲೊ ಎಳೆಯುವುದು
ಹಿಂಬದಿಯಲ್ಲಿ 'ಕಾಬಾ' ಇರಲು ಚರ್ಚು ನಿಂದಿದೆ ನನ್ನೆದುರು! ॥

## ಜೀವನ

ಲೋಕದ ಎಚ್ಚರವಿರಲಿ ಅಸದ್! ಪ್ರೀತಿಗಾಗಿ ಕಡುಕಷ್ಟವನುಂಡರು
ಮುರಿಯಲಾಗದೇ ರೂಢಿನಿಯಮಗಳ ಫರ್ಹಾದ್ ಪ್ರಾಣವನೇ ತೆತ್ತ ॥

ಈ ಜೀವನದಲಿ ವಿಶ್ವಾಸದ ನೆಲೆ ಕಂಡವರುಂಟೇನು?
ಕೃತಿಯಲ್ಲಿಳಿಯದ ಬರಿಯ ಶಬ್ದವದು ಹೆಚ್ಚಿನದಿನ್ನೇನು? ॥

ಎಲ್ಲಿದೆ ನೇಹ ಎಲ್ಲಿದೆ ಮೋಹ ಮಿತ್ರರೆಲ್ಲರುಪದೇಶಕರು
ಯಾರಿಹರಿಲ್ಲಿ ಸಹಾನುಭೂತಿಗೆ ನನ್ನ ಯಶದ ಸಹಚಿಂತಕರು? ॥

ಹೆಜ್ಜೆಹೆಜ್ಜೆಗೂ ಕುದಿಯುವ ನೆತ್ತರ ಕೆಂಗಿಡಿಗೊಳ್ಳುವುದು
ಕಲ್ಲುಬಂಡೆಯನು ಕೊರೆದು ಕೊಲ್ಲುವುದು ಬೇಗುದಿಯೆಂಬುವುದು ॥

ವೇದನೆಯಿಂದಲೆ ಪ್ರಾಣಕಪಾಯ ಹೃದಯವುಳ್ಳವರಿಗಾವ ಉಪಾಯ?
ಪ್ರೀತಿಯ ವೇದನೆಯಿಲ್ಲದೆ ಹೋದರೆ ಬದುಕೇ ವೇದನೆಗೊಂಬ ಅಪಾಯ! ॥

ಹಸಿರೂ ಉಸಿರೂ ಇಲ್ಲದ ಶಿಶಿರಕೆ ಚೈತ್ರದ ಚೆಲುವೇ ಸಿಂಗಾರ
ಬದುಕಿನ ಸುಖಮಯ ಕ್ಷಣಗಳ ಹಿಂದೆಯೆ ಶಾಶ್ವತ ದುಃಖದ ಕಡುಭಾರ ॥

ನನ್ನೀ ನೋವಿನ ಕ್ಷಣಗಳಲ್ಲಿ ನೆರವಾಗುವರುಂಟೇ ನನಗಾರು?
ಗಾಲಿಬ್! ಬಿಡಿಸಲು ಗಂಟಿರದಾ ದಿನ ಬಲವಾಗಿದ್ದವು ನನ್ನವೆ ಬೆರಳು! ॥

ನೋವಿನ ಬಿಸಿಯೇ ತಗಲದ ಹಾಗಿರೆ ತಲೆಯನ್ನೊಡೆದರು ನನಗೇನು?
ದೇಹದಿಂದ ತುಂಡರಿಸದಿದ್ದರೂ ನೆಲದೆಡೆ ಬಾಗದೆ ತಾನಿರದೇನು? ॥

ಸಿಂಧುವಿನಪಾರ ಜಲರಾಶಿಯಲಿ ಬೆರೆವುದೆ ಬಿಂದುವಿಗಾನಂದ
ಸಹನೆಯ ಸೀಮೆಯ ದಾಟಿದ ನೋವಿಗೆ ನೋವೇ ಸ್ವಚ್ಛಂದ ॥

ಎಂಥಾ ನಾಚಿಕೆ! ಎಲ್ಲಾ ಹೋಯಿತು. ಪ್ರಣಯದಲ್ಲಿ ತೊಳೆದು
ಉಳಿದದ್ದೇನೂ ಉಳಿಯಲೆ ಇಲ್ಲ ಅಕ್ಷರದಪೂರ್ಣ ಆಸಿಯನುಳಿದು ॥

ಬದುಕಿನ ನೋವು ನೋವಿನ ಬದುಕು ಒಂದೇ ನಾಣ್ಯದ ಎರಡು ಮುಖ
ಬದುಕಿದ್ದವರಿಗೆ ಮುಕ್ತಿಯೆ ಇಲ್ಲ -ನೋವಿನಿಂದ- ಬದುಕಾಗದು ವಿಮುಖ ॥

ಈರ್ಷೆಯಿಂದ ಮನ ಮಲಿನಗೊಂಡರೆ ಜಗದ ನಗೆಯ ಬಗೆಯಲ್ಲಿ ಬೆರೆ
ಬಗೆ ಬಗೆ ಜನಗಣ, ವಿಶಾಲ ಜೀವನ ಹರಿವವು ನಿನ್ನೀ ಕಣ್ಣ ಪೊರೆ ॥

ಗಾಲಿಬ್ ! ದೊರೆವುದೊ ಇಲ್ಲವೊ ಕಾಣೆ ನನ್ನ ಪ್ರಯತ್ನಕೆ ಇನಿತು ಫಲ
ಮಿಡತೆಯ ಹಾವಳಿ ಕೆಡಿಸದಿದ್ದರೂ ಮಿಂಚಿನಿಂದ ಹಾಳಹುದು ಹೊಲ ॥

ಹಗಲು ಕೊಳ್ಳ ಹೊಡೆದಾಗಲೆ ನನಗೆ ಇರುಳಲಿ ನೆಮ್ಮದಿ ದೊರೆಯುವುದು
ಕಳವಿನ ಭಯವೇ ಇರದೊಲು ಮಾಡಿದ ಕಳ್ಳಗೆ ಧನ್ಯತೆ ಸಲ್ಲುವುದು ॥

ಮನೆಯನೆ ತೊರೆದು ಹೊರಹೊರಟವಗೆ ತಂಗುವ ತಾಣದ ಹಂಗೇನು
ಮಸ್‌ಜಿದವಿರಲಿ ಶಾಲೆಯೆ ಇರಲಿ ಆಶ್ರಮವಾದರು ತಂಗೇನು! ॥

ನೇಹಿಗನಿಂದಲೆ ನನಗವಮಾನ ಬೆಂಕಿ ಬೀಳಲಿಗೊ ನೇಹಕ್ಕೆ !
ನೋವನು ಸಹಿಸದ ಜೀವಿಯ ನೇಹದ ನೆರಳಾದರು ನನಗೇತಕ್ಕೆ? ॥

ಹೂದೋಟದ ನಿಟ್ಟುಸಿರಿನ ಕತೆಯನು ಬಲೆಯಲಿ ಹೇಳಲು ಹೆದರದಿರು
ಕಳೆದ ದಿನವೆ ಕೋಲ್ಮಿಂಚು ಹೊಡೆದಿರಲು ನನ್ನದಾಗುವುದೆ ಆ ಗೂಡು? ॥

ನಿರ್ಜನ ತಾಣದ ನಿರಾಳ ಪರಿಸರದಲ್ಲಿ ನೆಲಸುವುದು ಪರಮ ಸುಖ
ಯಾಕೀತಕೆ ಒಣಮಾತಿನ ವಾದಕೆ ಪರಿಸಂವಾದಕೆ ಯಾವ ಮುಖ? ॥

ಬಾಗಿಲೆ ಇಲ್ಲದ ಗೋಡೆಗಳಿಲ್ಲದ ಮನೆ ಕಟ್ಟುವುದಿದೆ ನನ್ನಾಸೆ
ನೆರೆಹೊರೆ ಬೇಡ ಕಾವಲುಗಾರರರು ಬೇಡವೆ ಬೇಡ ಆಚೀಚೆ ॥

ಕಾಹಿಲೆ ಬಿದ್ದರೆ ನೋಡಿಕೊಳ್ಳಲಿಕೆ ಯಾರೂ ಬೇಡ ನನ್ನ ಬಳಿ
ಕೊನೆಯುಸಿರೆಳೆದರೆ ಅತ್ತು ಕರೆಯಲಿಕೆ ಯಾರೂ ಇರದಿರಲಿ! ॥

ಶ್ವಾಸ - ಶ್ವಾಸದಲಿ ಹುಟ್ಟುವ ಕಾವು ಕಾಯ ಸುಡುವುದಂತೆ!
ನನ್ನೊಳಗಿನ ಕಿಡಿ ಆರಿದಂತಿರೆ ಅನುದಿನ ಎದೆಗುದಿ ಬೆಳೆಯುತಿದೆ ॥

ಶಿಶಿರ - ವಸಂತ ಬಂದರರದೇನು ಯಾವ ಋತುವಿನಾ ಪಾಡೇನು
ನಿರಾಸೆಯಿಂದ ಆಗಸ ನೋಡುತ ಪಂಜರದಲಿ ನಾ ಬಿದ್ದಿಹೆನು ॥

ಸಮರ್ಥ ಧ್ವನಿಯೊಳಗೀ ಪೃಥಿವಿಯನು ಕೇಳಬೇಕು ಎಂದೆನಿಸುವುದು:
ಏನು ಮಾಡಿದೆ ನಿನ್ನೊಳಗವಿತಾ ತರತರದಮೂಲ್ಯ ನಿಧಿಯನ್ನು? ॥

ಯಾರೇ ಆಗಲಿ ಕೆಡಕು ಆಡಿದರೆ ಕಿವಿಗೊಡದಿರು ನೀನು
ಯಾರೇ ಆಗಲಿ ಕೆಡಕು ಮಾಡಿದರೆ ದನಿ ಗೊಡದಿರು ನೀನು ॥

ಅಡ್ಡದಾರಿಯನು ಹಿಡಿವುದು ಕಂಡರೆ ತಡೆದು ಹಿಡಿದು ನಿಲಿಸು
ತಪ್ಪು ಮಾಡಿದರೆ ತಪ್ಪುಗಾರನನು ಕ್ಷಮಿಸುವುದೇ ಲೇಸು! ॥

ಆಸೆಯನರಿಯದ ಒಬ್ಬರು ಕೂಡ ಜಗದೊಳು ಸಿಗಬಹುದೇ?
ಸಕಲರ ಆಸೆ ತುಂಬುವುದಾರಿಗೆ ಸಾಧ್ಯವಾಗಲಹುದೇ?

ನನಗೋ ಸಾವಿರ ಸಾವಿರದಾಸೆ ತುಂಬಿ ಕೊಡುವರೆನಗವನಾರು?
ಏನು ಬಯಕೆಗಳ ಪೂರೈಸಿದರೂ ಉಳಿದೇ ಇರುವವು ಹಲವಾರು! ॥

ಬಿಲ್ಲಿಗೆ ಬಾಣದ ಹೊಂದಿಕೆಯಿಲ್ಲದೆ ಬೇಟೆಗಾರನಿಗೂ ಬಲು ಗೋಳು
ನನಗೋ ನನ್ನೀ ಪಂಜರದಲ್ಲೆ ನೆಮ್ಮದಿಯುಂಟು ಬಹುಪಾಲು! ॥

## ಮಾನವ

ನರನಿಗಲ್ಲದೆ ಭೇರಿಗೆ ದೊರೆವುದೆ ದೈವಕೃಪೆಯ ಸಾರ?
ಮದಿರೆಯು ದೊರೆವುದು ಸೇವನೆಗೈವರ ಸಾಮರ್ಥ್ಯಕ್ಕನುಸಾರ ॥

ನಾನೂ ಹನಿಯೊಂದಾಗಿದ್ದರು ಸಹ ವಾಸ್ತವದಲ್ಲಿ ಹನಿಯೆ ಹೊಳೆ
ಆದರು ನಾನೆ ಹೊಳೆಯಾಗಿರುವೆನೆಂಬ ಜಂಬವನು ತೋರಿಸಲೊಲ್ಲೆ ॥

ಎರಡು ಲೋಕಗಳನಿತ್ತು ತಿಳಿದನವ ನಾನು ತೃಪ್ತನೆಂದು
ಶಾಂತನಾಗಿ ನಾ ಸುಮ್ಮನಿದ್ದೆ ಸರಿ ವಿರೋಧವೇಕೆಂದು ॥

ಸಭೆಯಲ್ಲುರಿಯುವ ಮೇಣಬತ್ತಿಗೆ ಇರರೇ ಕನಿಕರ ತೋರುವರು?
ತನ್ನ ಬದುಕನೇ ತಾ ಸುಡುವವಳಿಗೆ ನೆರವಿಗೆ ಬಹರಾರು? ॥

ಎಲ್ಲರದೇನೊ, ಕೆಲವರ ಒಳಗುಣ ಬಿರಿಯಿತು ಬಣ್ಣದ ಹೂಗೊಂಚಲ ಹಾಗೆ
ಮಣ್ಣಿನ ಮಡಿಲನು ಸೇರಿದವರದೋ ಎಂಥ ಚಲ್ವಿತ್ತೆ, ಏನು ಬಗೆ ! ॥

ಸಹರ್ಷ - ಸಂಭ್ರಮ - ಸಮ್ಮಿಲನದ ಸವಿ ಹಂಬಲ ನಮಗಿತ್ತು
ಆದರೀಗ ಅದೆ ಮರೆವಿನ ತೆರೆಯಲಿ ನಕ್ಷೆಯ ತೆರದಲಿ ಮರೆಯಾಯ್ತು ॥

ಉನ್ನತ ಸಾಧನೆಗೈವವಕಾಶದ ಬದುಕಿಗೆ ಹಾಕುವುದೇ ಬೆನ್ನು?
ಜೀವನದುದ್ದಕು ಅಮೂಲ್ಯ ಕಾಲವ ಪ್ರಾರ್ಥನೆಯೊಳೆ ಕಳೆದಿರಲೂನೂ! ॥

ಲೋಕದವಘಡದ ಪ್ರಶ್ನೆಗಳಲ್ಲಿ ಸಿಲುಕಿದನಿತು ನಾನು
ನನ್ನ ದಿಟವ ನಾನರಿಯದಂತೆ ಬಲು ದೂರಕ್ಕೆ ಸರಿದಿಹೆನು! ॥

## ಜೀವನ ದರ್ಶನ

ಬದುಕಿನ ತಳಹದಿಯಲ್ಲಿಯೆ ಅವಿತಿವೆ ನಾಶದ ಬೀಜಗಳು
ರೈತನ ಬೆವರೇ ಸಿಡಿಲಾಗುತ ಬೆಳೆ ಸುಡುವುದು ಸುಗ್ಗಿಯೊಳು ॥

ಪ್ರೇಮಲೀನವಹ ಜೀವದಲ್ಲಿಯು ಕುದಿವುದು ಬದುಕಿರುವಭಿಲಾಷೆ
ಸಿಡಿಲಾರಾಧನೆಗೈದರು ತಪ್ಪದು ಪಶ್ಚಾತ್ತಾಪದ ಪರಿಭಾಷೆ ॥

ಸೌಂದರ್ಯಾಲೋಚನೆಯಲ್ಲಿರುವುದು ಸುಂದರ ಕಾರ್ಯದ ಸವಿಗನಸು
ನನ್ನ ಸಮಾಧಿಯ ಒಳಗಡೆಯಿಂದ ತೆರೆದಿದೆ ನಾಕದ ಬಾಗಿಲು ॥

ಕಂಡೆಯಾ! ಕಾಣಲು ಸರಳವಾದ ಕ್ರಿಯೆ ಕಠಿಣವೆನಿಸುವುದು ಸಾಧನೆಗೆ
ಅಂತೆಯೆ ದುಸ್ತರ ನರನೇರುವುದು ಮಾನವನೆನಿಸುವ ಪಾವಟಿಗೆ ॥

ಇಚ್ಛಾಪ್ರೇರಿತ ಕಾರ್ಯಮಗ್ನತೆಗೆ ಪರಮಾನಂದದ ಆವರಣ
ಬದುಕಿನೊಳುಳಿವುದೆ ಸೊಗಸೆಂಬುವುದು ಇಲ್ಲದೆ ಹೋದರೆ ಆ ಮರಣ ॥

ನಾನೇ ಅಪಾರ ಸಿಂಧುವೆನ್ನುವುದು ಒಂದೊಂದು ಬಿಂದು
ನಾನೇ ಅವನೊಳು ಲೀನಗೊಳ್ಳಲು ಕೇಳುವುದೇನೆಂದು ॥

ಹನಿಯಿಂದಲೆ ಹೊಳೆ ಕಣಕಣದಿಂದ ಪೂರ್ಣದ ಪೂರ್ಣ ಸ್ವರೂಪ
ಅಪೂರ್ಣ ದೃಷ್ಟಿಗೆ ಜೀವನವೆಂಬುದು ಮಕ್ಕಳ ಆಟದ ನಿರ್ಲೇಪ ॥

ಅವನು ಕೊಟ್ಟ ಈ ಜೀವನವನ್ನ ನಾನವನಿಗೆ ಕೊಟ್ಟೆ
ಪಡೆದದ್ದೇನು ಕೊಟ್ಟದ್ದೇನು ಉಳಿದೇ ಉಳಿಯಿತು ಬಾಳಿನ ಬಟ್ಟೆ ॥

ಸಾಹಸವೆನಿತೋ ಅನಿತೇ ಪ್ರತಿಫಲ ಅನಾದಿಕಾಲದಿಂದ
ಕಣ್ಣೀರಿನ ಹನಿ ಮಣಿಗೊಳ್ಳದೆ ಉಳಿದುದು ತನ್ನಲಸಿಕೆಯಿಂದ ॥

ಮಾನವ ಮನವೋ ಅಸಂಖ್ಯ ಯೋಚನೆಗಳ ಕ್ರೀಡಾಂಗಣ
ಮಿತ್ರ ಸಮಾಜವೆ ಸೇರಿದ ಭಾಸ ನನಗೆ ಏಕಾಂತದ ಮೌನ ॥

ಹಗಲೂ ಇರುಳೂ ಚಲನವಲನದಲಿ ಲೀನ ಸಪ್ತಲೋಕ
ಏನಾದರು ಸರಿ ನಡೆದೇ ನಡೆವುದು ನಮಗೇತಕ್ಕಾತಂಕ? ॥

ಬದುಕಿನುದ್ದಕೂ ಕಾಯುವುದಾಯಿತು ಸಾವಿನ ದಾರಿಯನು
ಸಾವೇ ಬಂದರೆ ತಿಳಿಯದು ಮುಂದೆ ನಾವು ಕಾಂಬುದೇನು ॥

ಒಂದೊಂದೂ ತನೆಯಾಸುಪಾಸಿನಲಿ ಹಸಿದ ಬಾಯಿ ನೂರು
ಮಣಿಗೊಳ್ಳುವವರೆಗೆನಿತಾಯಾಸ ಪಡುವುದೊ ಹನಿ ನೀರು ॥

ಜೀವನದವಧಿಯೊ ಕಣ್ಣಿರೆಪ್ಪೆಯನು ಮುಚ್ಚಿ ತೆರೆದ ಹಾಗೆ
ಕಿಡಿಯ ಕುಣಿತ ಕೊನೆಗಾಣುವವರೆಗೆ ನಲಿವುದು ರಸಿಕ ಬಗೆ ॥

ಸಾವೊಂದೇ ಪರಿಹಾರ ಅಸದ್! ಜೀವನದೆಲ್ಲಾ ಕಳವಳಕೆ
ಎಂಥ ಗಾಳಿಯಲು ಉರಿಯಲೆ ಬೇಕು ಬತ್ತಿಯು ಬೆಳಗಿನ ಸ್ವಾಗತಕೆ ॥

ಅವಳು ವಚನದಲಿ ನನಗೆ ನಿಷ್ಠಳಿರೆ ಲೋಕದೃಷ್ಟಿಯಲಿ ಅವಿವೇಕ
ಸದ್ಗುಣಿಗಳಿಗೇ ಹೆಸರಿಡುವಂಥಾ ರೂಢಿಯ ಮಾಡಿದೆ ಈ ಲೋಕ ॥

ಧಾವಿಸುತಿದೆ ಈ ಬದುಕಿನ ಕುದುರೆ ನಿಲ್ಲುವುದೆಲ್ಲಿಯೊ ಗೊತ್ತಿಲ್ಲ
ಸವಾರಿಗೈವರ ಕೈಗೆ ಕಾಲಿಗೆ ಹತೋಟಿಯೆಂಬುದೆ ಸಿಗದಲ್ಲ ॥

ಬುದ್ಧಿವಂತರಿಗೆ ಬಾಳಿನ ಕಷ್ಟದ ಸುಂಟರಗಾಳಿಯೆ ಹಿರಿ ಶಾಲೆ
ಗುರುವಿನ ಏಟು ತಿಂದಂತೆಯೆ ಸರಿ ಅಪ್ಪಳಿಸಲು ಬಿರುಗಾಳಿಯಲೆ ॥

ನೋವನ್ನುಣ್ಣುವ ರೂಢಿಯಾದವಗೆ ನೋವಿನ ನೋವೆಂಬುವುದಿಲ್ಲ
ಕಷ್ಟಪರಂಪರೆ ಕಂಡಿರಲೆನಗೆ ದಾರಿ ಹುಡುಕುವುದು ಬಿರಿಯಲ್ಲ ॥

ಪರರುಪಕೃತಿಗಳ ಹಂಗಿಗೆ ಬಿದ್ದರೆ ಸವೆವುದು ಸ್ವ-ಕೃತಿ-ಪ್ರೇರಣೆಯು
ಲೋಕದ ಋಣದಲಿ ಬೀಳದೆ ಬಾಳಲು ಕಲಿಯಲು ಲೋಕವೆ ಮಾದರಿಯು ॥

ಮನುಜನ ಕಾರ್ಯಕ್ಷೇತ್ರದಲ್ಲಿಯೆ ಮನೆ-ಮಾಡಿದೆ ವಿಷಕೀಟಾಣು
ರೈತನ ಬೆವರೇ ಸಿಡಿಲಾಗಿಳಿಯುತ ಹಾಳ್ಗೆಡಿಸುವುದು ಬೆಳೆಯನ್ನು ॥

ಹನಿಯೆಂಬುವುದು ಹೆದ್ದೊರೆ ಸೇರಲು ಹೆದ್ದೊರೆಯಲಿ ಒಂದಾಗುವುದು
ಕೊನೆಯ ಸವಿಯ ಪರಿಣಾಮದಿಂದ ಪ್ರತಿ ಕಾರ್ಯವೂ ಸವಿಯೆನಿಸುವುದು ॥

ಮನೆಯೊಳಗೇನು ನಲ್ಮೆಯ ಜನರೋ ಮನೆಯ ಬದುಕು ಕಳೆಗೊಳ್ಳುವುದು
ಶೋಕಪ್ರಲಾಪದ ಅಪಸ್ವರದಲ್ಲಿ ಸಾವಿನ ಮಾರ್ದನಿ ಕೇಳುವುದು ॥

ಲೋಕದೊಳ್ಸಿರಿ ತುಂಬಿದೆಯಾದರು ಕೆಲವರೆ ತುಂಬೆದೆಯುಳ್ಳ ಜನ
ಮದಿರಾಪಾತ್ರೆಗಳೆಲ್ಲಾ ತುಂಬಿದ್ದರು ನಿಂತಂತಿದೆ ಮಧುಪಾನ ॥

ಬುದ್ಧಿಜೀವಿಗಳು ಯಾತರ ಮೇಲೆ ಪಡುವರೊ ಅನುದಿನ ಅಭಿಮಾನ
ಹೊರಬಾರದೆಯೆ ಮಾಡಿಕೊಂಡವರು ರೂಢಿಪರಂಪರೆಯನುಸಂಧಾನ ॥

ಅಂತದ ಸುಳುಹು ಅಂತರಂಗದಲಿ ನೆಲೆಗೊಂಡಿರುವುದು ಓ ಗಾಲಿಬ್!
ಅಂತೆಯೆ ಬದುಕಿನ ಬಿಡಿಬಿಡಿ ಎಳೆಗಳು ತಾರತಮ್ಯದಲಿ ಸೇರಿಹವು ॥

## ಪ್ರೇಮ

ಕಳೆದು ಹೋದ ನನ್ನ ಹೃದಯ ಮರಳಿ ಕೊಡೆನು ಎಂದೆ ನೀನು
ಎಂದೊ ಕಳೆದ ಹೃದಯ ಯಾರ ಬಳಿಗಿರುವುದೊ ನಾನು ಬಲ್ಲೆನು ॥

ಪ್ರೇಮದಿಂದ ಅರಿತುಕೊಂಡೆ ನಿಜ ಜೀವನದರ್ಥವನ್ನು
ಯಾವುದೆಲ್ಲ ಬೇನೆಗಳಿಗೆ ಮದ್ದೊ ಅದುವೆ ಮದ್ದಿಲ್ಲದ ಬೇನೆಯೆಂಬುದನ್ನು ॥

ಸರಳರೀತಿ ಚತುರಮತಿ ಮರೆವಿನಲ್ಲೆ ಜಾಗೃತಿ
ಸಾಮರಸ್ಯವಿರದೊಲಿದ್ದರು ನನ್ನ ಸೆಳೆವ ಚಮತ್ಕೃತಿ ॥

ಚೆಂಗುಲಾಬಿ ಪರಿಮಳವೊ ಎದೆಯಾಳದ ಕಳವಳವೊ ಮೋಂಬತ್ತಿಯ ಹೊಗೆಯೊ
ಯಾರು ನಿನ್ನ ಪರಿಧಿಯಿಂದ ಹೊರಹೊರಟರು ತಪ್ಪದು ನೈರಾಶ್ಯದ ನಿಟ್ಟುಸಿರು ॥

ಅವಳಿಗಂಟಿಕೊಂಡಿದ್ದರು ಅವಳ ಭಿನ್ನ ನಡತೆಯಿಂದ ಮುಕ್ತಿ ಬಯಸಿದೆ
ಆದರೇನು ಅವಳ ಕ್ರೌರ್ಯ ಅಡ್ಡ ಬಂತು ನನ್ನ ಸಾವಿನಾಸೆಗೆ ॥

ನಿನ್ನ ಇರುವು ತುಂಬಿ ಬೆಳಗಿ ತನ್ನ ಹೃದಯ-ದರ್ಪಣ
ಮಂಜುಮಣಿಗಳಲ್ಲಿ ಅರುಣ-ಕಿರಣ-ಛವಿಯ ದರ್ಶನ ॥

ವಿರಹದುಃಖ ಸುಡುವುದೆನ್ನ ಅಸದ್! ಜೀವ-ಭಾವ
ರಹಸ್ಯರತ್ನದಂಥ ನನ್ನ ಹೃದಯನಾವ ಕಾವ? ॥

ಅವಳಿಗಾಗಿ ಕುದಿ ಕುದಿವುದು ಎದೆಯಾಳದ ಹಬ್ಬಯಕೆ
ಅವಳನರಸಿಕೊಂಡು ಹೋದರೋ ಬರಿಯ ಬಳಲಿಕೆ ॥

ನನ್ನ ಜೀವವಧೆಯ ಬಳಿಕ ಅವಳು ಕ್ರೌರ್ಯ ತೊರೆದಳು
ತಾಪಗೊಂಡು ತೀವ್ರ ಪಶ್ಚಾತ್ತಾಪ - ಪರಿಯನರಿತಳು ॥

ಹದ್ದು ಮೀರಿ ಹೋಯಿತಕಟ ನಿನ್ನ ಉದಾಸೀನತೆ
ಎನಿತು ಕಾಲ ತೋಡಿಕೊಳಲಿ ಎನಿತು ಕಾಲ ಕೇಳುತಿರುವೆ ॥

ದೀಕ್ಷೆಯಿತ್ತ ಗುರುವೆ ನನಗೆ ಶಿಕ್ಷೆಯಿತ್ತು ನಲಿವನೇನು
ಅವನ ಜುಲುಮೆಯಿಂದ ನನ್ನ ಒಲುಮೆ ವ್ಯರ್ಥಗೊಳ್ಳುವುದೇನು ॥

ನನ್ನ ದೈವದಲ್ಲಿ ಇರಲೆ ಇಲ್ಲ ಅವಳ ನನ್ನ ಮಿಲನವು
ಎನಿತು ಕಾಲ ಬದುಕಿದರೂ ಕಾಯ್ದು ಕಾಯ್ದು ಸವೆಯಬಹುದು ಈ ಜೀವನವು ॥

ಅರೆಬಾಣದಂಥ ನಿನ್ನ ಓರೆಗಣ್ಣ ನೋಟನೆಂತು ಬಣ್ಣಿಸಲಾನು
ಹೃದಯ ಸೀಳಿ ಆಚೆಯೆ ಹೋಗಿದ್ದರೆಲ್ಲಿ ನನಗೆ ಇಂಥ ನೋವು? ॥

ಬಲ್ಲೆಯೇನು ಗಾಲಿಬ್! ಅವಳ ಮಾತು ಮಾತಿನಲ್ಲಿ ಆನಂದದ ಚಿಲುಮೆ
ನುಡಿಯೆ ಇರಲಿ ನಡೆಯೆ ಇರಲಿ ಹಾವಭಾವ ಸನ್ನೆಯಲ್ಲಿ ಹೊರಸೂಸುವ ಒಲುಮೆ ॥

ನನ್ನೊಲವಿನ ವೇದನೆಗೋ ಉಪಚಾರದ ಋಣಭಾರದ ಹಂಗೇ ಇಲ್ಲ
ಗುಣವನೇನು ಹೋಗಲಿಲ್ಲ ಅಂತೆ ನಾನು ಕೆಡಲು ಇಲ್ಲ ॥

ರೂಢಿ-ನಿಯಮದೊಳಕಲ್ಲಿಗೆ ತಲೆಗೊಟ್ಟವ ನಾನು
ಆದರೇನು ಬಿಡಲೆ ಇಲ್ಲ ನಿತ್ಯ ನಿನ್ನ ನೆನೆವುದನು ॥

ವಾದ-ಸಂವಾದವೂ ಸ್ನೇಹ-ಸಲಿಗೆಯ ಭಾಸವೀಯಬಹುದು
ತಾತ್ಸಾರದಂತರವ ಯಾರಾವ ಭಮೆಯಿಂದ ಗ್ರಹಿಸಲಹುದು? ॥

ನಾನು ಕಿವುಡ ನನಗವಶ್ಯ ಎರಡು ಪಟ್ಟು ನಿನ್ನ ಒಲವು
ಎರಡೆರಡು ಸಾರೆ ಹೇಳದೇನೆ ಅರ್ಥವಾಗದೆನಗೆ ಮಾತು ॥

ಒಂದು ಜನ್ಮ ಕಾಯಬೇಕು ಸಫಲವಾಗಲೆನ್ನೊಡಲಿನ ನಿಟ್ಟುಸಿರು
ಮನದನ್ನೆಯೆ, ನಿನ್ನ ಕೇಶರಾಶಿ ಬೆಳೆವವರೆಗೆ ಯಾರು ಜೀವಿಸುವರು? ॥

ನೀನು ಇಂಥ ತಾತ್ಸಾರವ ತಳೆವೆಯೆಂದು ನಾನು ತಿಳಿಯಲಿಲ್ಲ
ನನ್ನ ಮಿಡಿತ ನಿನಗೆ ತಿಳಿವ ತನಕ ಉಳಿಯೆನಲ್ಲ ! ॥

ಇಂಥ ಕ್ರೂರ ಲೋಕದಲ್ಲಿ ಎಸು ಕಾಲ ನಾನಿರುವೆನೊ ಬಲ್ಲವರಾರು
ವಿರಹದುರಿಯ ರಾತ್ರಿಗಳನು ಎಣಿಸಿ ಗುಣಿಸಿ ಸರಿ ಲೆಕ್ಕವನಿಟ್ಟವರಾರು ! ॥

ಒಸಗೆಯಾಳು ಬರುವವರೆಗೆ ಬರೆದಿಡಲೇನಿನ್ನೊಂದು ಒಲವಿನೋಲೆ
ನನ್ನ ಓಲೆಗೇನುತ್ತರ ಬಂದೆ ಬರುವುದೆಂದು ನಾನು ಬಲ್ಲೆ ॥

ಅವಳ ಸ್ನೇಹಕೂಟದಲ್ಲಿ ನನ್ನ ಸನಿಹ ಬಂದದುಂಟೆ ಸುರೆಯ ಬಟ್ಟಲು?
ಈಗ ಬಂದರೇನು ಫಲ, ಬೆರಸಿರಲೂ ಬಹುದು 'ಸಾಕಿ' ಏನಾದರೂ ॥

ಲಕ್ಷಲಕ್ಷ ಮಧುರ ಮಿಲನ ಒಂದೆ ಓರೆನೋಟ ಮೀರಿ ನಿಲ್ಲಬಲ್ಲುದು
ಲಕ್ಷ ಲಕ್ಷ ಪ್ರೀತಿ - ಚರಣ ಒಂದೆ ಕ್ರೋಧದಾಟ ಕೆಡಿಸಿ ಹಾಕಬಲ್ಲುದು ॥

ಬಯಕೆಯೆಂದರೇನೆ ಪೂಜೆಯೆಂದು ಮರುಳ ಜನರ ಭಾವನೆ
ಇಂಥ ಹೆಣ್ಣುಗೊಂಬೆಯನ್ನು ಪೂಜಿಸಲಿಕೆ ನಾನು ಮರುಳನೆ? ॥

ಅಳಲಿ ಬಳಲಿ ಗೋಗರೆವುದು ನಿಷ್ಕರುಣಿಯ ಮುಂದೆ ಬಯಕೆ ತೋಡಿಕೊಳುವುದು
ನನ್ನ ಅಳಲು ನಿನ್ನ ಕ್ರೌರ್ಯ ಅಧಿಕಗೊಳಲು ದೂರದಿರುವುದು ॥

ಅವಳು ಬಂದರೆನ್ನ ಮನೆಗೆ ದೈವಕೃಪೆಯೆ ನನ್ನ ಮನೆಯ ಬೆಳಗಿತೆಂಬೆನು
ಕೆಲವು ಕ್ಷಣ ಅವಳ ಕಡೆಗೆ ಕೆಲವು ಕ್ಷಣ ನನ್ನ ಮನೆಯ ನೋಡುತಿರುವೆನು ॥

ವೈರದಲ್ಲಿ ಪ್ರೀತಿಯಿರದು ಆದರೂನು ಜುಲೈಕಾ ಮೆಚ್ಚಿಕೊಂಡ ರೀತಿ
ಅದ್ಭುತವೇ ಕುನಾನ್ ಚಂದ್ರ ಯುಸುಫ್-ಮಿಸ್ರ ಮಹಿಳೆಯರೊಳು ಬೆಳೆದ ಸಂಪ್ರೀತಿ ॥

ಅವನ ನಿದ್ರೆ ಅವನ ಮನಸು ಅವನ ರಾತ್ರಿ - ಅವನದೆಲ್ಲವು
ಯಾರ ತೋಳ ಮೇಲೆ ನಿನ್ನ ಮುಂಗುರುಳು ಒರಗಿ ಹರಡಿಕೊಳ್ಳಬಲ್ಲವು? ॥

ಒಲವಿಲ್ಲದೆ ಬದುಕಿರುವುದು ಅಸಹನೀಯ ಅನುಭವವೇ - ನಾನು ಬಲ್ಲೆನು
ಆದರೂನು ವಿರಹ - ವಿಷದ ಸುಖವ ಸವಿವ ಶಕ್ತಿ ಕೂಡ ನನ್ನಲಿಲ್ಲವು ॥

ನನಗೆ ಗೊತ್ತು ಅವಳಿಗಿಲ್ಲ ದೈವಭಕ್ತಿ ಅವಳಿಗಿಲ್ಲ ನಿಷ್ಠೆ ಪ್ರೇಮಕೆ
ದೈವಭಾವವುಳ್ಳ ಜನರು ಅವಳ ದಾರಿಯತ್ತ ಪಾದ ಬೆಳೆಸಲೇತಕೆ? ॥

ನಿನ್ನ ಪ್ರೇಮ ನನಗೆ ಮಾತ್ರ ಮೀಸಲೆಂದು ಬಗೆಯಲಿಲ್ಲ ನಾನು
ನಿನ್ನ ದ್ವೇಷಕಾನಲ್ಲದೆ ಬೇರಾರೂ ಬಲಿಯಾಗದೆ ಉಳಿಯಲೆಂಬೆನು ॥

ನೀನು ನನಗೆ ಆಗದವನ ಬಗೆಗೆ ಚಿಂತೆಗೈವ ರೀತಿ ನನಗೆ ಸೇರದು
ದೂಷಣೆಯೊ ಘೋಷಣೆಯೊ ಯಾವ ಬಗೆಯ ಮಾತೇತಕೆ ಅವನ ಬಗೆಯದು? ॥

ಕಡೆಗಣಿಸಿದರೇನು, ನನ್ನ ಪುನರ್ಮಿಲನದಾಕಾಂಕ್ಷೆಗೆ ತೆರೆಯನೆಳೆಯಬೇಡ
ಆತ್ಮೀಯತೆಯಿಲ್ಲದಂಥ ನಿನ್ನ ಕಣ್ಣ ನೋಟದಿಂದ ನನ್ನ ಕೊಲ್ಲಬೇಡ ॥

ಪ್ರೀತಿಗೈದ ಮೇಲೆ ಮಾಡಲೇಕೆ ಸದ್ದು - ಗೊಂದಲ?
ಮನಸಿನಲ್ಲಿ ಕನಸಿಲ್ಲದೆ ಬರಿಯ ಬಾಯಿಯಲ್ಲಿ ಏಕೆ ನಾಲಿಗೆ - ಚಪಲ? ॥

ಅವಳು ತನ್ನ ಚಾಳಿ ಬಿಡದೆ ನಾನೇತಕೆ ಬಿಡಲಿ ನನ್ನ ಸ್ವಾಭಿಮಾನವನ್ನು?
ನನ್ನ ಬಗೆಗೆ ಕೋಪವೇಕೆ ತಲೆವಾಗಿಸಿ ಕೇಳಲೇಕೆ ನಾನವಳನ್ನು? ॥

ಎಲ್ಲಿ ನಿಷ್ಠೆ ಎಲ್ಲಿ ಪ್ರೀತಿ ತಲೆಯನೊಡೆವ ಮಾತುಗಳೇ ತಲೆಯನೆತ್ತಲು
ಎಲ್ಲೈ ಕಲ್ಲುಹೃದಯದವಳೆ, ಅಂತಾಗಲು ನನಗೇತಕೆ ನಿನ್ನ ಹೊಸತಿಲು? ॥

ನನ್ನ ಗೆಳೆಯ! ನಾನು ಇನಿತು ಅತ್ತು ಕರೆಯಬಾರದಿತ್ತು ಸುಮ್ಮಸುಮ್ಮನೆ
ತಿಳಿಯಲಿಲ್ಲ ಮೊದಲು ಹೀಗೆ ಬೆಳೆವುದೆಂದು ಒಡಲ ವೇದನೆ ॥

ನನ್ನ ಎದೆಯೊಳಿಹುದು ಗಾಲಿಬ್! ಅವಳ ಕೂಡಿ ಅಳಲ ತೋಡಿಕೊಂಬ ಹಂಬಲ
ಆ ಸುದಿನಕಾಗಿ ಕಾಯ್ವೆ ಹಗುರುಗೊಳಿಸಿಕೊಳಲು ನಮ್ಮ ಎದೆಯ ಕಳವಳ ॥

ಗಾಲಿಬ್ ! ನಿನ್ನ ವ್ಯಥೆಯ ಕಥೆಯನವಳ ಮುಂದೆ ಹೇಳಬಲ್ಲೆವು
ಅವಳ ಮನಸು ಕರಗಿ ನಿನ್ನ ಕರೆಯಬಲ್ಲಳೇನು ಎಂದು ಹೇಳಲರಿಯೆವು ॥

ನೀನೆ ನನ್ನ ಬದುಕು ಎಂಬ ನಿನ್ನ ಉಕ್ತಿಯೀಗ ಮತ್ತೆ ನೆನಪಿಸಬೇಡ
ಈಗಲೀಗ ಬೇಸರವೆನಿಸುತ್ತಿದೆ ಈ ಬದುಕೆಂಬುದು ಕೂಡ ॥

ಹರಿದು ಹಾಕಬೇಡ ಇಬ್ಬರನ್ನು ಬೆಸೆದ ಸ್ನೇಹ ಸೂತ್ರವನ್ನು
ಪ್ರೀತಿಯಿಲ್ಲದಿದ್ದರೂನು ನಿನ್ನಂತರವನು ಸಹಿಸಿಕೊಳ್ಳಬಲ್ಲೆ ನಾನು ॥

ನಿನಗೆ ಹಗೆಯ ಬಗೆಯಲಾರೆ ನೀನೆ ನನ್ನ ಮರೆತರೂ
ನನಗೆ ಆಗದವರ ಮೈತ್ರಿಯೀಗ ನಿನಗೆ ದೊರೆತರೂ ॥

ಅವಳನೊಮ್ಮೆ ಕಣ್ಣ ತುಂಬ ನೋಡುವ ಕ್ಷಣ ಬಂದಿರೆ
ಎಂಥ ದೈವ! ನಾನೆ ನೋಡಬೇಕೆ ಅವಳು ನನ್ನ ಕಡೆಗೆ ನೋಡದೆ ! ॥

ತಲೆಯ ಬಿಸಿಯು ಹೆಚ್ಚಿದಂತೆ ಹೃದಯವಹುದು ತಣ್ಣಗೆ
ಸುರೆಯ ಬಿಸಿಗೆ ಗಾಜು ಕೂಡ ಪುಡಿಗೊಂಬುದು ನುಣ್ಣಗೆ ॥

ಮರೆವಿನ ಮುಖವಾಡದಲ್ಲಿ ಮಮತೆಯನ್ನೆ ಮರೆಯಾಗಿಸಿದರು
ಅವಳ ದೃಷ್ಟಿ ದಿಟವರಿಯದೆ ಬಿಡದು ನಾ ಮೈ ಮರೆತರೂ ॥

ನನ್ನ ಪ್ರಾಣದ ಪ್ರಾಣದರ್ಶನದ ಆನಂದದಲಿ ನನ್ನ ಕಣ್ಣೀರು ಇಂಗಬಹುದು
ಸ್ವರ್ಗದಪ್ಸರೆಯರೊಳು ನಿನ್ನಂಥ ನಲ್ಮೊಗವು ಕಾಣುವುದೆ ಸಂದೇಹವು ॥

ನನ್ನ ನಿಧನದ ಬಳಿಕ ನಿನ್ನ ಓಣಿಯೊಳೆನ್ನ ಹೂಳದಿರು ಜೋಕೆ!
ನನ್ನ ಪತ್ತೆಯ ಮೇಲೆ ಈ ಲೋಕ ನಿನ್ನ ಮನೆ ಹುಡುಕಲೇಕೆ? ॥

ಓ! ನನ್ನ ಕಾದಲೆಯ ಬೀದಿಯಲಿ ವಾಸಿಸುವ ಬಾಂಧವರೆ
ನೋಡುತಿರಿ ಎಲ್ಲಿಯಾದರು ಮರುಳ ಗಾಲಿಬ್ ಕಾಣಬಹುದು ನಿಮಗೆ ॥

ಪ್ರಳಯಾಗ್ನಿಯೊಳು ಕೂಡ ಇಂಥ ಬಿಸಿಯಿದ್ದೀತೆ
ನನ್ನಂತರಂಗದಲಿ ಸಿಡಿವಂಥ ಬೇರೆ ಕಿಡಿಯಿದ್ದೀತೆ? ॥

ಅವಳ ಮುಖಚರ್ಯೆಯನು ಈ ಮೊದಲು ಕಂಡಿಹೆನು ಹಲವು ಬಾರಿ
ಅವಳ ಕೋಪಾವಿಷ್ಟ ಭಾವ ಬೇರೆಯೆ ಇರುವುದೇಕೇನೊ ಈ ಸಾರಿ ॥

ಒಲವಿನೊಸಗೆಯೆಂಬುದಿಲ್ಲ ಮಲ್ಲೋಗದಲಿ ನಗೆಯ ಸುಳಿವು ಮೊದಲಿಗಿಲ್ಲ
ಅಂತೆ ನನ್ನ ಕಿವಿ - ಕಣ್ಣಿಗೆ ಇನಿತೆನಿತೂ ಶಾಂತಿಭಂಗವಿಲ್ಲ ॥

ಪೂರ್ಣಿಮೆಯ ಚಂದಿರನ ಚೆಲ್ವಿಕೆಯ ಚೆಲ್ವಿಕೆಯು - ಅದಕೆ ಸಮನಿಲ್ಲ
ಆದರೆನ್ನ ಚಂದ್ರಮುಖೀ ಮನದನ್ನೆಯ ಸೂರ್ಯಪ್ರಭೆ ಮೀರಿಸಲಾರಿಲ್ಲ ॥

ಅವಳು ಬಳಿಗೆ ಬಂದರಾಯ್ತು ನನ್ನ ಮುಖದ ಮೇಲೆ ಶಾಂತಿ ತಾನೆ ಬರುವುದು
ರೋಗಿ ನೆಟ್ಟಗಾದನಲ್ಲ ಎಂಬ ಭಾವ ಅವಳ ಮನಸಿನಲ್ಲಿ ಹೊಳೆವುದು ॥

ನನ್ನ ನಿಧನದಿಂದ ನಿನಗೆ ಸಮಾಧಾನವಾಗಲಿ ಬಿಡಲಿ
ಪರಕಿಸುವುದು ಉಳಿದಿದ್ದರೆ ಪರಿಕಿಸಿ ಬಿಡು ಇದೆಲ್ಲವು ಇಂತಿರಲಿ ॥

ಸಹನೆ - ಸಂಯಮಯುಕ್ತ ಮಿಲನ ವಿರಹಕ್ಕಿಂತ ಮಿಗಿಲಲ್ಲವು
ಕಾದಲೆಯ ಧಿಟ್ಟತನ ಕಾದಲಿನ ಹುಂಬತನ ಸೇರಿದರೆ ಸವಿಯುಹುದು ಬದುಕೆಲ್ಲವು ॥

ಅವಳ ಚೆಂದುಟಿಗಳಿಗೆ ಒಂದಿಲ್ಲೊಂದು ದಿನ ಮುತ್ತು ನಾನೀಯಬಹುದು
ಬಂದದ್ದು ಬರಲೆಂಬ ಧೈರ್ಯವೊಂದಿರಲು ಪ್ರಬಲ ಇಚ್ಛೆಯದೊಮ್ಮೆ ಫಲಿಸಬಹುದು ॥

ಕನಸಿನೊಳಗಾದರೂ ಅವಳೊಮ್ಮೆ ಬಂದೆನಗೆ ಸಾಂತ್ವನವ ನೀಡಿದರೆ ನನಗೆ ತೃಪ್ತಿ
ಅದಕಿಂತಲೂ ಮೊದಲು ಹೃದಯದುರಿ ಆರಿಸುವ ನಿದ್ರೆ ಬಂದರೆ ಶಾಂತಿ ॥

ಅವನಿಗಾಕೆ ಒಲಿದಿದ್ದರೆ ಸಹಜವೆ ಸೈ, ಏನೆಂದರು ಏನು ಫಲ
ನನ್ನ ಒಸಗೆಯೊಯ್ದವನೆ ಅವಳೊಲವನು ಪಡೆದ ಮೇಲೆ ಏನೆಂದರು ಏನು ಫಲ ॥

ಪ್ರೀತಿಯಲ್ಲಿ ಬದುಕು-ಸಾವಿಗಾವ ಫರಕು ಇಲ್ಲವು
ಯಾರಿಗಾಗಿ ಸಾಯುವೆವೋ ಆ 'ಕಾಫಿರ'ನನೆ ನೋಡಿ ಜೀವ ಹಿಡಿವೆವು! ॥

## ಅಹಮಿಕೆ

ಪ್ರೇತವಸ್ತ್ರದಾಚ್ಛಾದನವಿರದ ಕೃಶಶರೀರವು ಹೊರಗಿ ಸೊರಗಿದ ಗಾಲಿಬನದು
ದೇವರವಗೆ ಮುಕ್ತಿ ಕೊಡಲಿ ಅದೆಂಥ ನಿರ್ಮುಕ್ತ ನಿಷ್ಠೆಯ ಬದುಕು ಅವನದು! ॥

ನನ್ನ ಮೌನದಲ್ಲಿ ಹುದುಗಿಕೊಂಡಿರುವವು ಸಾವಿರದ ಪೂರ್ಣ ಬಯಕೆಗಳು
ನಾನೊ ನಂದಿ ಹೋದ ದೀಪ ಮಸಣದಲ್ಲಿ ಬಡವನ ಗೋರಿಯ ಪಕ್ಕದೊಳು ॥

ನನ್ನ ಕಷ್ಟ - ಸಂಕಟದಲಿ ಕೇಳೆಯರೀವ ಸಾಂತ್ವನದಾ ಫಲವದೇನು?
ಗಾಯ ಮಾಯಗೊಳುವ ತನಕ ಉಗುರು ಮತ್ತೆ ಬೆಳೆಯದಿರುವುದೇನು?

ಗುರುವು ನನ್ನ ನೋಡ ಬಯಸಿ ಬಂದರಿದ್ದೋ ನನ್ನ ಸ್ವಾಗತ
ಹೇಳಬಲ್ಲರೇನು ಯಾರು ಅವನೀಯುವ ಉಪದೇಶದ್ದಾವ ಅಭಿಮತ? ॥

ನಿನ್ನ ನಂಬಿ ಬದುಕಿ ನಿಂತೆ ನಿನ್ನ ವಚನ ಸುಳ್ಳೆಂಬುವ ಸತ್ಯವರಿತೆನೆಂದು
ಪೂರ್ಣ ನಂಬಿ ಬಿಟ್ಟಿದ್ದರೆ ಆ ನಂಬಿಕೆಯಾನಂದದಿ ಹೋಗುತ್ತಿತ್ತು ಪ್ರಾಣವೆನ್ನದು ॥

ವೇದಾಂತದ ವಿಷಯವನ್ನು ಎನಿತು ಸರಳ ರೀತಿಯಲ್ಲಿ ಹೇಳುವೆ ಗಾಲಿಬ್
ಕುಡಿತದೊಂದು ಕಸರಿರದಿರೆ ನಿನ್ನನೊಬ್ಬ ಸಂತನೆಂದೆ ಭಾವಿಸಬಹುದಿತ್ತು! ॥

ಅವನ ಆಳು ನಾನಾದರು ಸ್ವಯಂ-ಪ್ರತಿಭೆಯುಳ್ಳ ವ್ಯಕ್ತಿಯೆಂಬುದು ದಿಟವು
'ಕಾಬಾ' ದ ದ್ವಾರ ತೆರೆಯದಿರಲು ಮರಳಿ ಬಂದರಲ್ಲೆ ನವಜೀವನ ಪುಟವು ॥

ಗಾಲಿಬ್ ತೀರಿ ಹೋಗಿ ದೀರ್ಘಕಾಲವಾದರೂನು ನೆನಪು ಬಂದೇ ಬರುವುದು
ಕ್ಷಣಕ್ಷಣಕೂ ಅವನ ಮಾತು : ಹೀಗಿದ್ದರೇನಾಗುತ್ತಿತ್ತೆಂಬುದು ॥

ಉರ್ದು ಕಾವ್ಯ ಪರಿಣತಮತಿಯು ನೀನೊಬ್ಬನೇ ಅಲ್ಲವೊ ಗಾಲಿಬ್
ಅರಿಯೆಯಾ 'ಮೀರ್' ಎಂಬುವನೊಬ್ಬನು ಇದ್ದ ಮೊದಲಿನ ಕಾಲದೊಳು ॥

ಅವಳ ಚೆಲ್ವಿಕೆಯ ಬಣ್ಣನೆ ಪದೆ ಪದೆ ಮಾಡಿದ್ದೇ ಬಂತು
ನಂಬಿದ ನೇಹಿಗ ವೈರಿಯ ಹಾಗೆ ವರ್ತಿಸುವಂತಾಯ್ತು ॥

ನನ್ನ ವಾಸಸ್ಥಾನ ಆಗಸದ ಅಂಚಿನಡಿಯೊಳಗಿದ್ದಿದ್ದರೆ
ನಿರ್ಮಿಸಲು ಬಹುದಿತ್ತು ಉತ್ತುಂಗ ನೆಲೆಯಲ್ಲಿ ಹೊಸ ತಂಗುದಾಣವನೆ ॥

ಯಾವ ಕಲೆಯೊಳಗಿತ್ತು ನನಗಿನಿಸಿತು ಪರಿಣತಿಯು?
ಏಕಿಂತು ತಿರುಗಿತೋ ಗಾಲಿಬ್! ನನ್ನ ಗ್ರಹಗತಿಯು? ॥

ಜಗವೆಲ್ಲ ಕೇಳುವುದು : ಗಾಲಿಬ್ ಯಾರು?
ನಾ ಹೇಳಬೇಕೇನೆಂದು ಹೇಳುವರೆ ಯಾರು? ॥

ದೀಪವಾರಿದ ಮೇಲೆ ಹೊಗೆಯಾಡುವುದು ಸಹಜ
ನಾನು ತೀರಿದ ಮೇಲೆ ಕಪ್ಪಗಾಯಿತು ನನ್ನ ಪ್ರೇಮಾಗ್ನಿತೇಜ ॥

ಪ್ರೇಮದುನ್ಮಾದ - ಮದಿರೆಯನು ಕುಡಿಯಲಿಕೆ ಮುಂಬರುವರಾರು
ನಾನು ಕಣ್ಮರೆಯಾಗೆ 'ಸಾಕಿ' ಯೇ ಮರುಕರೆಯ ನೀಡಬಹುದು ॥

ಕಳೆದುಕೊಂಡಿರಲೀಗ ವಾಕ್‌ಶಕ್ತಿಯನೆ ನಾನು
ಅವಳು ಕೇಳುವುದಿಂತು : ಅವನು ಹೇಳದೆ ನಾನು ತಿಳಿವೆನೇನು? ॥

ಸ್ವೀಕೃತಿಯ ವಿಶ್ವಾಸವಿದ್ದರೂ ಮಾಡದಿರು ನೀನಾವ ಪ್ರಾರ್ಥನೆಯನು
ಬೇಡುವುದೆ ಬಂದರೂ ಬೇಡದಿರು ಪ್ರಾರ್ಥನಾರಹಿತ ಹೃದಯವನ್ನು ॥

ಬಂದೆ ಬರುವುದು ನನ್ನ ಅಗಣಿತ ಅಪೂರ್ಣ ಆಸೆಗಳ ನೆನಪು
ಓ ದೇವ! ಕೇಳದಿರು ನಾ ಗೈದ ಅಪರಾಧಗಳ ಬೇರೀಜು ॥

ನನ್ನ ಸುಪ್ತ ಭಾಗ್ಯದಿಂದ ಒಂದೆ ಒಂದು ಕನಸಿನ ಕಡ ಪಡೆಯುವಾಸೆ ನನಗೆ
ಆದರೆ ಗಾಲಿಬ್ ಹೇಗೆ ನಾನು ಈ ಸಾಲವನೂ ತೀರಿಸಬಲ್ಲೆ? ॥

ಜಗವು ನನ್ನ ದಾರಿಯನ್ನೆ ತುಳಿವುದೆಂದು ತಿಳಿವುದು
ದೊಡ್ಡ ತಪ್ಪು ಉತ್ತಮಿಕೆಯು ಸರ್ವಹೃದಯಗಳನು ಗೆಲುವುದೆಂದು ತಿಳಿವುದು ॥

ಓ ದೇವನೆ! ಜಗಕೇತಕೆ ನನ್ನನಳಿಸಿ ಬಿಡುವ ವ್ಯರ್ಥ ಛಲವು
ಬಾಳ ಪುಟದ ಮೇಲೆ ಎರಡು ಸಲ ಗೀಚಿದ ಅಕ್ಷರ ನಾನಲ್ಲವು ॥

ಕಲ್ಲು - ಮಣ್ಣಿನದಲ್ಲ ಈ ನನ್ನ ಹೃದಯ ಅದರಲ್ಲಿ ತುಂಬಿಹುದು ನೋವಿನಳಲು
ನನಗಾರ ಹಂಗೇನು ನಾನು ಸಾವಿರ ಬಾರಿ ಉಕ್ಕಿಸಿದರೂ ನನ್ನ ಕಣ್ಣೀರ ಕಡಲು! ॥

ಗವಿಯಲ್ಲ ಗುಡಿಯಲ್ಲ ಅಲ್ಲ ಮಸ್‌ಜೀದೆ ಅಲ್ಲ ಅಂತ:ಪುರವು
ನಾನು ದಾರಿಯ ಮೇಲೆ ಕುಳಿತಿರಲು ಯಾರೇಕೆ ನನ್ನನೆಬ್ಬಿಸುವುದು? ॥

ಅವಳಿಗವಳ ಸೌಂದರ್ಯದಭಿಮಾನ ನನಗೂ ಸಂಯಮದತ್ತ ಗಮನ
ನಾವೆಂತು ಕೂಡುವುದು ನಡುದಾರಿಯಲ್ಲಿ, ಅವಳಾಗಿ ಕರೆಯದಿರಲೆಂಥ ಮಿಲನ? ॥

ವಾಸ್ತವದ ಜತೆ ಜೀವಿಸಲು ನಾನು ಕಲಿತೇನು
ನೀನಿಂತು ನಡೆಸಿದರೂ ಮೊಗದಿರುಹಿ ನಡೆವುದನು ॥

ಇಹದಲ್ಲಿ ಪರದಲ್ಲಿ ಏನೆಲ್ಲ ದೊರೆವುದೊ ಬಿಡುವುದೊ ನನಗೆ ಗೊತ್ತುಂಟು
ನನ್ನ ಸಾಹಸವೃತ್ತಿ ಬಿಚ್ಚಲಿಕೆ ಬಿಡಲಿಲ್ಲ ಇಹ-ಪರದ ಗಂಟು ॥

ಮಜ್ನೂ ಮಾಡಿದ್ದೇನು ಸಾ ನಿನಗೆ ತೋರಿಸಲು ಬಹುದಿತ್ತು
ನನ್ನೊಡಲ ಕಳವಳದ ಎಳೆತ-ಸೆಳೆತಗಳಿಂದ ದೊರೆತರೊಂದಿಷ್ಟು ಪುರಸೊತ್ತು ॥

## ಸ್ವಂತಕ್ಕೆ

ತೀರಿ ಹೋದುವೋ ಗಾಲಿಬ್ ! ಕಷ್ಟ-ಸಂಕಟಗಳೆಲ್ಲ
ಆಕಸ್ಮಿಕ ಸಾವೆಂಬುದೊಂದೆ ಇನ್ನು ಉಳಿದಿಹುದಲ್ಲ ! ॥

ಬಾಳೆಲ್ಲ ಈ ಬಗೆಯ ಗೋಳಿನಲಿ ಕಳೆದಾಯ್ತು
ಗಾಲಿಬ್! ದೇವಕೃಪೆಯೆಂಬುದನೆ ಮರೆತ ಹಾಗಾಯ್ತು ॥

ಸುರೆಗಾಗಿ ಅಡವಿಟ್ಟೆ ಪ್ರಾರ್ಥನೆಯ ಹಾಸು ಬಟ್ಟೆ ರಾಜಪೋಷಾಕು
ಬಹುಕಾಲ ಮರೆತಿದ್ದ ಚೈತ್ರನೊಲವಿನ ಕರೆಗೆ ಮತ್ತೆ ಓಗೊಡಬೇಕು ॥

ಇರಬಹುದೆ ಯಾರಾದರೂ ಗಾಲಿಬನೆ ಗೊತ್ತಿಲ್ಲವೆನ್ನುವವರು?
ಅವನೊಬ್ಬ ಒಳ್ಳೆ ಕವಿ ಊರಿನೊಳಗೋ ಅವಗೆ ಕೆಟ್ಟ ಹೆಸರು! ॥

## ಚೈತ್ರ

ಅಹಾ! ಚೈತ್ರ ಮತ್ತೆ ತನ್ನ ಗರಿಯ ಬಿಚ್ಚಲು
ಚಂದ್ರ-ಸೂರ್ಯರೂನು ಬೆರಗುಗೊಂಡು ನಿಂತರು ! ॥

ಎಲೈ ಬುವಿಯ ವಾಸಿಗಳೆಲ್ಲ ನೋಡಿ ನಲಿಯಿರಿ
ಇದುವೆ ಸರಿ ವಿಶ್ವದಲಂಕಾರ ವೈಖರಿ! ॥

ಇಲ್ಲಿ - ಅಲ್ಲಿ - ಎಲ್ಲೆಲ್ಲಿಯು ಭೂಮಿ ಹಸಿರೆ ಹಸಿರು
ನೀಲಿ ಬಾನ ಬಿಂಬದಲ್ಲು ತುಂಬಿ ನಿಂತ ಕುಸುರು !

ಹಸಿರಿಗೆಲ್ಲ ತಂಗುದಾಣ ದೊರೆಯದಾಗಿರೆ
ಜಲಾಂತರಗಂಗೆಯಾಗಿ ಸೆಲೆಯೂರಿತು ಹಸಿರೆ ॥

ಹಸಿರಿನಲ್ಲಿ ಮೆರೆವ ಹಲವು ಹೂಗಳ ಚೆಲುವು
ಕಪ್ಪು ಕಮಲ ಕಣ್ಣರಳಿಸಿ ಹೊರಸೂಸುವ ಒಲವು ॥

ಗಾಳಿಯಲ್ಲಿ ತುಂಬಿರುವುದು ಮದಿರೆಯ ಅಮಲು
ಇದರ ಮುಂದೆ ವ್ಯರ್ಥ ಇತರ ಎಲ್ಲ ಮದಿರೆಯಮಲು! ॥

## ಮೃತ್ಯುಪತ್ರ

ರಂಗ-ತರಂಗಿತ ಜೀವನ ಶೈಲಿಯ ನೂತನ ಪ್ರೇಮಿಗಳೇ
ಎಚ್ಚರ! ಬದುಕನು ಮೋಜಿನ ಮಂಟಪವೆಂದು ಭಾವಿಸುವರೇ! ॥

ಪರರನುಭವದಲಿ ಪಾಠ ಪಡೆವ ಮನವಿದ್ದರೆ ನೋಡಿರಿ ನನ್ನೆಡೆಗೆ
ಸದುಪದೇಶವನು ಕೇಳುವ ಕಿವಿಯಿರೆ ಕೇಳಿರಿ ನನ್ನ ಕಥೆ ॥

'ಸಾಕಿ'ಯ ಸುಂದರ ರೂಪವೆ ವೈರಿಯು ಧರ್ಮ - ಜ್ಞಾನಗಳಿಗೆ
ಸಂಗೀತದ ಸವಿ ಗುಂಗು ಹಿಡಿಸುವುದು ಬುದ್ಧಿಜೀವಿಗಳಿಗೆ ॥

ಕಳೆದಿರುಳು ನಾ ಕಂಡ ರಂಗಶಾಲೆಯಾ ಮೂಲೆ ಮೂಲೆಯಲ್ಲಿ
ಸುರಿದಂತಿತ್ತು ತೋಟಿಗ ತರ ತರ ಹೂವು ಝಲ್ಲಿ - ಝಲ್ಲಿ ॥

'ಸಾಕಿ'ಯ ಹೆಜ್ಜೆಯ ಮಂದ ಮಂದ ಗತಿ ಸಮೂಹಗಾನದ ಮಧುರ ಶ್ರುತಿ
ಕಣ್ಣು-ಕಿವಿಗಳನು ಸೂರೆಗೊಂಡಿತ್ತು ಸ್ವರ್ಗಸಮ ಸೌಂದರ್ಯದಾನಂದರೀತಿ ॥

ಮರುದಿನ ನೋಡಿದರಲ್ಲೇನಿದೆ ಆ ರಂಗಶಾಲೆಯಲ್ಲಿ?
ಕಳೆದಿರುಳಿನ ಆನಂದವು ಇಲ್ಲ ಅಮಲಿನ ಹೊನಲೆಲ್ಲಿ? ॥

ಉಳಿದುದೊ ರಾತ್ರಿಯ ಕುಣಿತದ ಮಣಿತದ ವಿರಹದ ಸಂಕೇತ
ಆರಿದ ದೀಪವು ಮೌನವನಾಂತು ನಿಂತಿದೆ ತಣ್ಣಗೆ ಮರಗುತ್ತ ॥

ಅಜ್ಞಾತ ಲೋಕದಿಂದಿಳಿದು ಬರುವವ್ರೋ ಯೋಚನೆಗಳ ಸಾಲು
ಲೇಖನಿಯೀ ಧ್ವನಿ ಬರುವುದೊ ಗಾಲಿಬ್! ದೇವದೂತನಾ ವಾಣಿಯೊಲು ॥

## ವಿವಿಧ

ಏನು ದೈವವಿದು! ಅವಳಾಡಿದ ಒಂದೊಂದು ನುಡಿ ಕೇಳುತ ನಿಂದಿರಲು
ನನಗೆನಿಸಿತು ನಿಜ ನನ್ನೆದೆಮಿಡಿತವೆ ಅವಳ ಮಾತಿನಲಿ ಮಾರ್ದನಿಗೊಂಡವೊಲು ॥

'ಸಾಕಿ'ಯೆ ಈ ದಿನ ಗೌರವವಿರಲಿ ಇದು ಪ್ರೀತಿಯ ಗುರುತು
ಇಲ್ಲವಾದರೆ ದಿನದಿನದಿರುಳೂ ನಾ ಕುಡಿದೇನು ಇತಿ-ಮಿತಿಗಳ ಮರೆತು ॥

ಹೇಳಿಕೇಳುವುದು ಏನುಳಿದಿಲ್ಲ ಆದರು ಸಂಗಾತಿಯೆ ಕೇಳು:
ನನ್ನ ನಮನಗಳನವಳಿಗೆ ತಿಳಿಸು ಸಿಗಲು ಒಸಗೆಯಾಳು ॥

ನಮಗೇನಿಲ್ಲ 'ಖಿಜ್ರ' ನ ದಾರಿಯನನುಸರಿಸುವ ಹಂಗು
ನೆಮ್ಮದಿಯೆಂದರೆ ಸದ್ಭಾವದ ಸಹಪಯಣಿಗ ದೊರೆತದ್ದು ॥

ಕತ್ತಲ ಕೋಣೆಯ ತುಂಬಾ ಹರಡಿದೆ ನೈರಾಶ್ಯದ ನೆರಳು
ಬೆಳಗಿನ ಗುರುತಿಗೆ ಉಳಿದ ದೀಪವೂ ಸುಯ್ದಿದೆ ಮೌನದೊಳು ॥

ಮಣ್ಣಿನ ಬಟ್ಟಲು ಒಡೆದರೆ ಮತ್ತೆ ಕೊಂಡು ತರಲು ಬಹುದು
ಇರಾಣಿನರಸ ಜಮಶೇಡನ ಪಾತ್ರೆಗಿಂತಲೂ ಮಣ್ಣಿನದೇ ಮಿಗಿಲು ॥

ನನ್ನೊಳು ತುಂಬಿವೆ ಸಾವಿರ ದೂರು ರಾಗಾಲಾಪದ ವಾದ್ಯದೊಲು
ತಂತಿಯನಿನಿತು ಮಿಡಿದು ನೋಡಿದರೆ ಪರಿಣಾಮವೆ ದಿಗಿಲು ! ॥

ಏನು ಮಾಡಿದರು ನನ್ನ ಗಾಯವಿದು ಮಾಯುವಂಥದಲ್ಲ
ದೇವರೆ! ನನ್ನೆದುರಾಳಿಗೆ ನೀಡು ಗುಣವಾಗುವ ವರವ ॥

ಸಾವಿನಲ್ಲಿಯೆ ತನ್ನ ನೋವುಗಳ ಮುಕ್ತಿಯ ಬಯಸುವನು
ಸಾಯದೆ ಉಳಿದರೂ ನೋವಿನ ಕಾವಿನ ಕಷ್ಟದಿ ನವೆಯುವನು ॥

'ಬಾರದು ಬಪ್ಪದು ಬಪ್ಪುದು ತಪ್ಪದು' ಎಂಬ ದಿಟದ ಸೊಲ್ಲು
ದಿಟಗೊಳದಿದ್ದರೆ ಸಾವಿನ ಬಗೆಗೇ ನಾನು ಮಸೆವೆ ಹಲ್ಲು ॥

ಮನುಜನ ಬದುಕನು ಹಾಳ್ಗೆಡಿಸಲು ಈ ಜಗಳ ಸಾಲದೇನು?
ಮೈತ್ರಿಯದೊಮ್ಮೆ ಕುದುರಿತೊ ವೈರದ ಬಾನಿನ ಭಯವೇನು? ॥

ನೀತಿ ನಿಯಮಗಳ ಜೀವನಸೌಧಕೆ ಶಿಸ್ತಿನ ಅಡಿಪಾಯ
ಇದನರಿಯದ ಕೊಲೆಗಾರನ ನಡತೆಗೆ ಯಾವ ಉಪಾಯ? ॥

ಒಂದೆ ಮಾತಿಗೆ ನಿನ್ನ ನಾಲಿಗೆ ಕುತ್ತಿಗೆ ಸಿಗಬಹುದು
ಸರಿಯೇ ಯಾರೇನಾಡುವುದೆಲ್ಲಾ ಯಾರೋ ಕೇಳುವುದು ॥

ಎಲ್ಲಿ ಗಡಂಗದ ಬಾಗಿಲು ಗಾಲಿಬ್! ಎಲ್ಲಿ ಧರ್ಮಗುರುವು
ಬಲ್ಲೆನು ಮಾತ್ರ ನಿನ್ನ ಹೋಗಳತಿರಲಾತ ನಾನು ಹೊರಟೆ ॥

ಗಾಲಿಬ್! ಕೋಪಿಸಿಕೊಳ್ಳುವುದೇಕೆ ಧರ್ಮಗುರುವು ಹೆಸರಿಟ್ಟಲ್ಲಿ?
ಸಕಲರಿಂದಲೂ ಮೆಚ್ಚಿಕೆ ಪಡೆದವರುಂಟೇ ಜಗದಲ್ಲಿ? ॥

'ಸಾಕಿ' ಗೆ ಉಸುರಲು ನಾಚಿಕೆ ಬರುವುದು ಮಾಡುವುದಿನ್ನೇನು?
ದಿಟವೆಂದರೆ ನನಗಿರುವುದು ನೆಮ್ಮದಿ ಮದಿರೆಯ ಬಟ್ಟಲೊಳು! ॥

ದೂರ ದೇಶದೊಳು ದೂರ ಸರಿಯಿತೋ ಮರಣ ನನ್ನನುಳಿದು
ದೇವರ ಕೃಪೆಯಿದು ನಾ ಬದುಕಿರುವುದು ಅನಾಥನಾಗಿ ಉಳಿದು! ॥